ಶ್ರೀಃ



# ಶ್ರೀ ಸಂಕಷ್ಟಹರಗಣೇಶ ವ್ರತ

# ಪೂಜಾಕ್ರಮಃ

(ಸಂಕಷ್ಟ ಚತುರ್ಥೀ ವ್ರತಾಚರಣೆ ಮಾಡುವವರಿಗಾಗಿ)





ಸಂಗ್ರಾಹಕರು

ಆಗಮ - ಜ್ಯೌತಿಷ - ಶ್ರೌತ - ಸ್ಮಾರ್ತ - ವೇದಾಂತ - ಪರಿಣತ

**ಕೆ. ಗಣಪತಿ ಸೋಮಯಾಜಿ**

**ಶಿರೋಮಣಿ - ವಿದ್ವಾನ್**

ಪ್ರಾಪ್ತಿಸ್ಥಾನಂ

ಶ್ರೀ ಗಣೇಶ ಕೃಪಾ, 1237, 25 A ಮುಖ್ಯರಸ್ತೆ, 9ನೇ ಬ್ಲಾಕ್,

ಜಯನಗರ, ಬೆಂಗಳೂರು - 69



ಶ್ರೀಃ

ಶ್ರೀ ಸಂಕಷ್ಟಹರಗಣೇಶ್ವರಃ ಪ್ರಸನ್ನಃ

# ಅಥ ಶ್ರೀ ಸಂಕಷ್ಟಹರಗಣೇಶ ವ್ರತ ಪೂಜಾಕ್ರಮಃ

ಶ್ರೀಃ— ಶ್ರಾವಣ ಕೃಷ್ಣಚತುರ್ಥ್ಯಾಮಾರಭ್ಯ ಕೃಷ್ಣಚತುರ್ಥೀಷುಯಾವಜ್ಜೀವಂ, ಏಕವಿಂಶತಿ ವರ್ಷಾಣಿ ವಾ ಏಕವರ್ಷಂ ವಾ ಸಂಕಷ್ಟಚತುರ್ಥೀವ್ರತಂ ಕಾರ್ಯಂ। ಅಶಕ್ತೌ ಪ್ರತಿವರ್ಷಂ ಶ್ರಾವಣ ಚತುರ್ಥ್ಯಾಮೇವ ಕಾರ್ಯಂ। ಸಂಕಷ್ಟ ಚತುರ್ಥೀತು ಚಂದ್ರೋದಯ ವ್ಯಾಪಿನೀಗ್ರಾಹ್ಯಾ। ಪರದಿನೇ ಚಂದ್ರೋದಯ ವ್ಯಾಪ್ತೌ ಪರೈವಗ್ರಾಹ್ಯಾ। ಉಭಯದಿನೇ ಚಂದ್ರೋದಯ ವ್ಯಾಪ್ತಿತ್ವೇ ತೃತೀಯಾಯು ತೈವಗ್ರಾಹ್ಯಾ। ದಿನದ್ವಯೇ ಚಂದ್ರೋದಯವ್ಯಾಪ್ತ್ಯ ಭಾವೇ ಪರೈವಗ್ರಾಹ್ಯಾ। ಧರ್ಮಸಿಂಧು ಪ್ರ.ಪ.

## ಅಥ ಪ್ರಯೋಗಃ

ಆಚಮ್ಯ, ಗುರುಗಣೇಶಪೂಜಾಂಕೃತ್ವಾ, ಘಂಟಾನಾದಂಕೃತ್ವಾ, ಆಸನಶುದ್ಧಿಂ ವಿಧಾಯ, ಪ್ರಾಣಾಯಾಮಂಕೃತ್ವಾ, ಸಂಕಲ್ಪ್ಯ, ಅಸ್ಮಾಕಂ ಸಹ ಕುಟುಂಬಾನಾಂ ಸಂಕಷ್ಟಹರಗಣೇಶಪ್ರಸಾದೇನ ವಿದ್ಯಾ-ಧನ-ಪಶು-ಪುತ್ರಲಾಭಾದಿ ಸಂಕಷ್ಟಹರಗಣ ಪತಿ ವ್ರತೋಕ್ತ ಸಮಸ್ತ ಫಲಾವಾಪ್ತ್ಯರ್ಥಂ ಶ್ರೀ ಸಂಕಷ್ಟಹರಗಣೇಶ್ವರ ಪ್ರೀತ್ಯರ್ಥಂ ನಾರದ ಪುರಾಣೋಕ್ತ ಪ್ರಕಾರೇಣ ಯಥಾಸಂಭಾವಿತ ನಿಯಮೇನ, ಯಥಾಮಿಳಿತ ದ್ರವ್ಯೈಃ ಶ್ರೀ ಸಂಕಷ್ಟಹರಗಣೇಶ್ವರ ವ್ರತಾಖ್ಯಂ ಕರ್ಮ ಕರಿಷ್ಯೇ — ಇತಿ ಸಂಕಲ್ಪ್ಯ

ತದಂಗ ಕಲಶಾರ್ಚನ-ಶಂಖಪೂಜಾದಿಕಂಕೃತ್ವಾ, ಶಂಖೋದಕೇನ ಪೂಜಾ ದ್ರವ್ಯಾಣಿ, ದೇವಂ ಆತ್ಮಾನಂ ಚ ಪ್ರೋಕ್ಷ್ಯ, ಆತ್ಮಾರ್ಚನಂ ಕುರ್ಯಾತ್। ತತೋ ಮಂಟಪಂಧ್ಯಾತ್ವಾ, ಶುಚೌದೇಶೇ, ಗೋಮಯೇನ ಉಪಲಿಪ್ಯ, ತತ್ರ ಅಷ್ಟದಳಪದ್ಮಂ ಲಿಖಿತ್ವಾ, ತದುಪರಿ ಕಲಶಂ ಸಂಸ್ಥಾಪ್ಯ, ತಸ್ಯೋಪರಿ ವೇಣುಪಾತ್ರೇಗಣೇಶಂ ಪ್ರತಿಷ್ಠಾಪ್ಯ ದ್ವಾರ ಪೂಜಾಂಕುರ್ಯಾತ್॥

ಧಾತ್ರೇ ನಮಃ। ವಿಧಾತ್ರೇ ನಮಃ। ಚಂಡಾಯ ನಮಃ। ಪ್ರಚಂಡಾಯ ನಮಃ। ಜಯಾಯ ನಮಃ। ವಿಜಯಾಯ ನಮಃ। ಶಂಖನಿಧಯೇ ನಮಃ। ಪುಷ್ಪ ನಿಧಯೇ ನಮಃ।

ಪೂರ್ವದ್ವಾರೇ ದ್ವಾರಶ್ರಿಯೈ ನಮಃ। ವಕ್ರತುಂಡಾಯ ನಮಃ। ಏಕದಂತಾಯ ನಮಃ। ದಕ್ಷಿಣದ್ವಾರೇ ದ್ವಾರಶ್ರಿಯೈ ನಮಃ। ಮಹೋದರಾಯ ನಮಃ। ಗಜಾನ ನಾಯ ನಮಃ। ಪಶ್ಚಿಮದ್ವಾರೇ ದ್ವಾರಶ್ರಿಯೈ ನಮಃ। ಲಂಬೋದರಾಯ ನಮಃ। ವಿಕಟಾಯ ನಮಃ। ಉತ್ತರದ್ವಾರೇ ದ್ವಾರಶ್ರಿಯೈ ನಮಃ। ವಿಘ್ನರಾಜಾಯ ನಮಃ। ಧೂಮ್ರ ವರ್ಣಾಯ ನಮಃ। (ಅಥವಾ-ಪೂರ್ವದ್ವಾರೇ ದ್ವಾರಶ್ರಿಯೈ ನಮಃ। ಇಂದ್ರಾಯ ನಮಃ। ದಕ್ಷಿಣದ್ವಾರೇ ದ್ವಾರಶ್ರಿಯೈ ನಮಃ। ಗೌರೀಪತಯೇ ನಮಃ। ಪಶ್ಚಿಮದ್ವಾರೇ ದ್ವಾರಶ್ರಿಯೈ ನಮಃ। ರತ್ಯೈ ನಮಃ। ಉತ್ತರದ್ವಾರೇ ದ್ವಾರಶ್ರಿಯೈ ನಮಃ। ಮಹ್ಯೈ ನಮಃ। ಯಜ್ಞವರಾಹಾಯ ನಮಃ। ಇತಿವಾ)

ಅಥ ಭೂಪ್ರಾರ್ಥನಾದಿ ಕಲಶಪೂಜಾಂಕೃತ್ವಾ, ಕಲಶೇ ಕಲಶ ದೇವತಾಂ ವರುಣಮಾವಾಹ್ಯ। ಕಲಶಸ್ಯ ಮುಖೇವಿಷ್ಣು... ಜಲೇಸ್ಮಿನ್ ಸನ್ನಿಧಿಂಕುರು - ಇತ್ಯಂತಂ ಉಚ್ಚಾರ್ಯ, ಆವಾಹನಂ ಕರಿಷ್ಯೆ।

ಶುಕಋಷಿಃ। ಅನುಷ್ಟುಪ್ ಛಂದಃ। ಶ್ರೀ ಸಂಕಷ್ಟಹರಗಣೇಶ್ವರೋ ದೇವತಾ ಓಂ ನಮೋಹೇರಂಬಾಯ ಮದಮೋದಿತಾಯ ಮಮ ಸಂಕಷ್ಟಂ ನಿವಾರ ಯ ನಿವಾರಯ ಹುಂಫಟ್ ಸ್ವಾಹಾ - ಸಾಂಗಂಸಾಯುಧಂ ಸವಾಹನಂ ಸಪರಿವಾರಂ ಸರ್ವದೇವತಾತ್ಮಕಂ ಶ್ರೀ ಸಂಕಷ್ಟಹರಗಣೇಶ್ವರಂ ಆವಾಹಯಾಮಿ। ಭೂಃ ಸಂಕಷ್ಟ ಹರಗಣೇಶ್ವರಂ ಆವಾಹಯಾಮಿ। ಭುವಃ ಸಂಕಷ್ಟಹರಗಣೇಶ್ವರಂ ಆವಾಹ ಯಾಮಿ। ಸುವಃ ಸಂಕಷ್ಟಹರಗಣೇಶ್ವರಂ ಆವಾಹಯಾಮಿ। ಭೂರ್ಭುವಃ ಸುವಃ ಶ್ರೀ ಸಂಕಷ್ಟಹರಗಣೇಶ್ವರಂ ಆವಾಹಯಾಮಿ। ಶ್ರೀ ಸಂಕಷ್ಟಹರಗಣೇಶ್ವರಾಯ ನಮಃ ಆವಾಹಯಾಮಿ, ಸ್ಥಾಪಯಾಮಿ, ಪೂಜಯಾಮಿ।

ಸಶಕ್ತಿಸಾಂಗಸಾಯುಧ ಸವಾಹನಾಯ ಸಪರಿವಾರಾಯ ಶ್ರೀ ಸಂಕಷ್ಟಹರ ಗಣೇಶ್ವರಾಯ ನಮಃ ಪೀಠಪೂಜಾಂ ಕರಿಷ್ಯೇ।

ಓಂ ಆಧಾರಶಕ್ತ್ಯೈ ನಮಃ। ಓಂ ಮೂಲ ಪ್ರಕೃತ್ಯೈ ನಮಃ। ಓಂ ಕೂರ್ಮಾಯ ನಮಃ। ಓಂ ಅನಂತಾಯ ನಮಃ। ಓಂ ಪೃಥಿವ್ಯೈ ನಮಃ। ಓಂ ಇಕ್ಷುಸಾಗರಾಯ

ನಮಃ। ಓಂ ರತ್ನದ್ವೀಪಾಯ ನಮಃ। ಓಂ ಕಲ್ಪವೃಕ್ಷಾಯ ನಮಃ। ಓಂ ಮಣಿಮಂಟಪಾಯ ನಮಃ। ಓಂ ರತ್ನಸಿಂಹಾಸನಾಯ ನಮಃ। ಓಂ ಶ್ವೇತಚ್ಛತ್ರಾಯ ನಮಃ। ಓಂ ಧರ್ಮಾಯ ನಮಃ। ಓಂ ಜ್ಞಾನಾಯ ನಮಃ। ಓಂ ವೈರಾಗ್ಯಾಯ ನಮಃ। ಓಂ ಐಶ್ವರ್ಯಾಯ ನಮಃ। ಓಂ ಅಧರ್ಮಾಯ ನಮಃ। ಓಂ ಅಜ್ಞಾನಾಯ ನಮಃ। ಓಂ ಅವೈರಾಗ್ಯಾಯ ನಮಃ। ಓಂ ಅನೈಶ್ವರ್ಯಾಯ ನಮಃ। ಓಂ ಸರ್ವ ತತ್ವಪದ್ಮಾಯ ನಮಃ। ಓಂ ಆನಂದಕಂದಾಯ ನಮಃ। ಓಂ ಸಂವಿನ್ನಾಲಾಯ ನಮಃ। ಓಂ ಪ್ರಕೃತಿಮಯದಲೇಭ್ಯೋ ನಮಃ। ಓಂ ವಿಕಾರ ಮಯ ಕೇಸರೇಭ್ಯೋ ನಮಃ। ಓಂ ಪಂಚಾಶದ್ವರ್ಣಕರ್ಣಿಕಾಯೈ ನಮಃ। ಓಂ ಪೃಥಿವ್ಯಾತ್ಮನೇ ಪರಿವೇಷಾಯ ನಮಃ। ಓಂ ಅಂ ಅರ್ಕಮಂಡಲಾಯ ದ್ವಾದಶವಸು ಪ್ರದಕಲಾತ್ಮನೇ ನಮಃ। ಓಂ ಉಂ ಸೋಮಮಂಡಲಾಯ ಷೋಡಶ ಕಾಮಪ್ರದಕ ಲಾತ್ಮನೇ ನಮಃ। ಓಂ ಮಂ (ರಂ) ವಹ್ನಿಮಂಡಲಾಯ ದಶಧರ್ಮಪ್ರದಕಲಾತ್ಮನೇ ನಮಃ। ಓಂ ಸಂ ಸತ್ವಾಯ ನಮಃ। ಓಂ ರಂ ರಜಸೇ ನಮಃ। ಓಂ ತಂ ತಮಸೇ ನಮಃ। ಓಂ ಮಂ ಮಾಯಾಯೈ ನಮಃ। ಓಂ ವಿಂ ವಿದ್ಯಾಯೈ ನಮಃ। ಓಂ ಅಂ ಆತ್ಮನೇ ನಮಃ। ಓಂ ಉಂ ಅಂತರಾತ್ಮನೇ ನಮಃ। ಓಂ ಮಂ ಪರಮಾತ್ಮನೇ ನಮಃ। ಓಂ ಸಂ ಸರ್ವತತ್ವಾತ್ಮನೇ ನಮಃ। ಶ್ರೀ ಸಂಕಷ್ಟಹರಗಣೇಶ್ವರಾಯ ನಮಃ। ಪೀಠಪೂಜಾಂ ಸಮರ್ಪಯಾಮಿ। ನವಶಕ್ತಿ ಪೂಜಾಂ ಕರಿಷ್ಯೇ—

ಓಂ ತೀವ್ರಾಯೈ ನಮಃ। ಓಂ ಜ್ವಾಲಿನ್ಯೈ ನಮಃ। ಓಂ ನಂದಾಯೈ ನಮಃ। ಓಂ ಭೋಗದಾಯೈ ನಮಃ। ಓಂ ಕಾಮರೂಪಿಣ್ಯೈ ನಮಃ। ಓಂ ಉಗ್ರಾಯೈ ನಮಃ। ಓಂ ತೇಜೋವತ್ಯೈ ನಮಃ। ಓಂ ಸತ್ಯಾಯೈ ನಮಃ। ಓಂ ವಿಘ್ನನಾಶಿನ್ಯೈ ನಮಃ। ಓಂ ಹ್ರೀಂ ಗಂ ಸರ್ವಶಕ್ತಿ ಕಮಲಾಸನಾಯ ನಮಃ। (ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಗಂ ನಮೋಭಗವತೇ ಸರ್ವಭೂತಾತ್ಮನೇ ಸರ್ವಶಕ್ತಿ ಕಮಲಾಸನಾಯ ನಮಃ) ಓಂ ನಮೋ ಹೇರಂಬಾಯ ಮದಮೋದಿತಾಯ ಮಮಸಂಕಷ್ಟಂ ನಿವಾರಯ ನಿವಾರಯ ಹುಂಫಟ್ ಸ್ವಾಹಾ—ಶ್ರೀ ಸಂಕಷ್ಟಹರಗಣೇಶ್ವರ ಮೂರ್ತಯೇ ನಮಃ ಸುವರ್ಣ ಪೀಠಂ ಕಲ್ಪಯಾಮಿ।

ಅನುಪಮ-ಮಖಿಲಾತ್ತದ್ಧ್ವಂ ಸನಂ ವ್ಯೋಮಪದ್ಮ-
ಪ್ರವರ-ಮಗಣಿತೋದ್ಯತ್ಪತ್ರಕಂ ಸ್ವಚ್ಛವರ್ಣಂ।
ದಿವಸ-ರಜನಿ-ನಾಥ-ಭ್ರಾಜಮಾನಾಂಕರಂಧ್ರಂ



ಸ್ಮರತು ಪುನರಮುಷ್ಮಿನ್ ಜ್ಯೋತಿಷಾಂಧಾಮಮಾದ್ಯಂ ॥

ನಿಪತಿತ-ಮಥ ಯಸ್ಮಾತ್ ತೇಜಸಃ ಸನ್ನಿಕಾಶಾತ್
ಲಘುತರಕತಮುದ್ಯತ್ಕೋಟಿ ಭಾಸ್ವತ್ಪ್ರಕಾಶಂ ।
ಹೃದಯನಿಹಿತಮೂರ್ತೌ ಭಾವಯಿತ್ವಾ ಸಮರ್ಚಾಂ
ಮನುವಿ-ದನುವಿದಧ್ಯಾತ್ ಸಾರ್ಧಮಂಗಾದಿಭಿಶ್ಚ ॥

ಸ್ವಾತ್ಮಸಂಸ್ಥಂ ಅಜಂ ಶುದ್ಧಂ ತ್ವಾಮದ್ಯ ಗಣನಾಯಕ ।
ಅರಣ್ಯಾಮಿವಹವ್ಯಾಶಂ ಮೂರ್ತಾವಾವಾಹಯಾಮ್ಯಹಂ ॥

ಓಂ ಆಂ ಹ್ರೀಂ ಕ್ರೋಂ ಯರಲವಶಷಸಹೋಂ ಸಂಹಂಸಃ ।
ಶ್ರೀ ಸಂಕಷ್ಟಹರಗಣೇಶ್ವರಸ್ಯ ಪ್ರಾಣಾಇಹ ಪ್ರಾಣಾಃ ।
ಓಂ ಆಂ ಹ್ರೀಂ ಕ್ರೋಂ ಯರಲವಶಷಸಹೋಂ ಸಂಹಂಸಃ ।
ಶ್ರೀ ಸಂಕಷ್ಟಹರಗಣೇಶ್ವರಸ್ಯ ಜೀವ ಇಹ ಸ್ಥಿತಃ ।
ಓಂ ಆಂ ಹ್ರೀಂ ಕ್ರೋಂ ಯರಲವಶಷಸಹೋಂ ಸಂಹಂಸಃ ।

ಶ್ರೀ ಸಂಕಷ್ಟಹರಗಣೇಶ್ವರಸ್ಯ ಸರ್ವೇಂದ್ರೀಯಾಣಿ ಇಹಸ್ಥಿತಾನಿ ಪೃಥಿವ್ಯಪ್ತೇಜೋವಾಯ್ವಾಕಾಶ ಶಬ್ದಸ್ಪರ್ಶರೂಪರಸಗಂಧ ಶ್ರೋತ್ರತ್ವಕ್ಚಕ್ಷುರ್ಜಿಹ್ವಾಘ್ರಾಣ ವಾಕ್ಪಾಣಿಪಾದಪಾಯೂಪಸ್ಥ ವಚನಾದಾನ ವಿಹರಣ ವಿಸರ್ಗಾನಂದ ಮನೋಬುದ್ಧಿ ಚಿತ್ತಾಹಂಕಾರಜ್ಞಾನಾತ್ಮ ಪರಮಾತ್ಮಾನ ಇಹೈವಾಗತ್ಯ ಸುಖಂ ಚಿರಂ ತಿಷ್ಠಂತು ಸ್ವಾಹಾ ॥

ಓಂ ಅಸುನೀತೇ ಪುನರಸ್ಮಾಸು ಚಕ್ಷುಃ ಪುನಃ ಪ್ರಾಣಮಿಹ
ನೋ ಧೇಹಿ ಭೋಗಂ । ಜ್ಯೋಕ್ಪಶ್ಯೇಮ ಸೂರ್ಯ ಮುಚ್ಚರಂತ
ಮನುಮತೇ ಮೃಳಯಾನಃ ಸ್ವಸ್ತಿ ॥ ಪುನರ್ನೋ
ಅಸುಂ ಪೃಥಿವೀ ದದಾತು ಪುನರ್ದ್ಯೌರ್ದೇವೀ ಪುನರಂತರಿಕ್ಷಂ ।
ಪುನರ್ನಃ ಸೋಮಸ್ತನ್ವಂ ದದಾತು ಪುನಃ ಪೂಷಾ ಪಥ್ಯಾಂ (೩) ಯಾ ಸ್ವಸ್ತಿಃ ॥

ಓಂ ಭೂರ್ಭುವಃಸುವರೋಂ ಸಶಕ್ತಿ ಸಾಂಗಸಾಯುಧ ಸವಾಹನ ಸಪರಿವಾರ ಶ್ರೀ ಸಂಕಷ್ಟಹರಗಣೇಶ್ವರ ಭಗವನ್ ಅತ್ರೈವಾಗಚ್ಛಾ ಗಚ್ಛಾ ಆವಾಹಯಾಮಿ ।

ಆವಾಹಿತೋ ಭವ । ಸಂಸ್ಥಾಪಿತೋ ಭವ । ಸನ್ನಿಹಿತೋ ಭವ । ಸನ್ನಿರುದ್ಧೋ ಭವ । ಅವಕುಂಠಿತೋ ಭವ । ಅಮೃತೀಕೃತೋ ಭವ । ಪ್ರಸನ್ನೋ ಭವ । ಕ್ಷಮಸ್ವ ।

ಏಕದಂತಾಯ ವಿದ್ಮಹೇ ವಕ್ರತುಂಡಾಯ ಧೀಮಹಿ ।
ತನ್ನೋದಂತಿಃ (ತೀ) ಪ್ರಚೋದಯಾತ್ ।
ತತ್ಪುರುಷಾಯ ವಿದ್ಮಹೇ ವಕ್ರತುಂಡಾಯ ಧೀಮಹಿ ।
ತನ್ನೋದಂತಿಃ ಪ್ರಚೋದಯಾತ್ ।
ವಿನಾಯಕಾಯ ವಿದ್ಮಹೇ ಗಜಾನನಾಯ ಧೀಮಹಿ ।

ತನ್ನೋ ವಿಘ್ನಃ ಪ್ರಚೋದಯಾತ್ — ಇತಿ ತ್ರಿವಾರ ಮರ್ಘ್ಯಂ ದತ್ವಾ । ಶುಕಋಷಿಃ । ಅನುಷ್ಟುಪ್ ಛಂದಃ । ಶ್ರೀ ಸಂಕಷ್ಟಹರಗಣೇಶ್ವರೋ ದೇವತಾ —

| | |
|---|---|
| ಓಂ ನಮೋ ಹೇರಂಬಾಯ | ಹೃದಯಾಯ ನಮಃ |
| ಮದಮೋದಿತಾಯ | ಶಿರಸೇ ಸ್ವಾಹಾ |
| ಮಮಸಂಕಷ್ಟಂ | ಶಿಖಾಯೈವಷಟ್ |
| ನಿವಾರಯ | ಕವಚಾಯ ಹುಂ |
| ನಿವಾರಯ | ನೇತ್ರತ್ರಯಾಯವೌಷಟ್ |
| ಹುಂಫಟ್ ಸ್ವಾಹಾ | ಅಸ್ತ್ರಾಯಫಟ್ |



ಭೂರ್ಭುವಃ ಸ್ವರೋಮಿತಿ ದಿಗ್ಬಂಧಃ ಧ್ಯಾನಂ —

ಶ್ವೇತಂ ಶ್ವೇತಾಂಗವಸ್ತ್ರಂ ಸಿತ ಕುಸುಮಗಣೈಃ ಪೂಜಿತಂ ಶ್ವೇತಗಂಧೈಃ
ಕ್ಷೀರಾಬ್ಧೌ ರತ್ನದ್ವೀಪೇ ಸುರತರು ವಿಲಸದ್ರತ್ನಸಿಂಹಾಸನಸ್ಥಂ ।
ದೋರ್ಭಿಃ ಪಾಶಾಂಕುಶೇಷ್ಟಾಭಯ ಧೃತಿರುಚಿರಂ ಚಂದ್ರಮೌಳಿಂ ತ್ರಿನೇತ್ರಂ
ಧ್ಯಾಯೇಚ್ಛಾಂತ್ಯರ್ಥಮೀಶಂ ಗಣಪತಿಮಮಲಂ ಶ್ರೀ ಸಮೇತಂ ಪ್ರಸನ್ನಂ ॥

ಲಂಬೋದರಂ ಚತುರ್ಬಾಹುಂ ತ್ರಿನೇತ್ರಂ ರಕ್ತವರ್ಣಕಂ ।
ನಾನಾರತ್ನೈಃ ಸುವೇಷಾಢ್ಯಂ ಪ್ರಸನ್ನಾಸ್ಯಂ ವಿಚಿಂತಯೇತ್ ॥

ವಿನಾಯಕಂ ಹೇಮವರ್ಣಂ ಪಾಶಾಂಕುಶಧರಂ ವಿಭುಂ ।
ಧ್ಯಾಯೇದ್ಗಜಾನನಂ ದೇವಂ ಭಾಲಚಂದ್ರಸಮಪ್ರಭಂ ॥

ಮೂಲಮಂತ್ರಂ ಅಷ್ಟವಾರಂ ಜಪೇತ್ ॥

ಓಂ ನಮೋ ಹೇರಂಬಾಯ ಮದಮೋದಿತಾಯ ಮಮಸಂಕಷ್ಟಂ ನಿವಾರಯ ನಿವಾರಯ ಹುಂಫಟ್ ಸ್ವಾಹಾ ॥ ಲಂ ಪೃಥಿವ್ಯಾತ್ಮನಾ – ಇತ್ಯಾದಿ ಪಂಚೋಪಚಾರ ಪೂಜಾಂ ಕುರ್ಯಾತ್ ।

## ಅಥ ಕಲ್ಪೋಕ್ತಷೋಡಶೋಪಚಾರ ಪೂಜಾ

### 1. ಧ್ಯಾನಂ

ಗಣಾಧಿಪ ನಮಸ್ತುಭ್ಯಂ ಸರ್ವಸಿದ್ಧಿಪ್ರದಾಯಕ ।
ಗೃಹಾಣ ದೇವದೇವೇಶ ಗಣೇಶಃ ಪ್ರೀಯತಾಮಿತಿ ॥

ಧ್ಯಾಯೇದ್ಗಜಾನನಂ ದೇವಂ ತಪ್ತಕಾಂಚನ ಸುಪ್ರಭಂ ।
ಚತುರ್ಭುಜಂ ಮಹಾಕಾಯಂ ಸೂರ್ಯಕೋಟಿಸಮಪ್ರಭಂ ॥

ಗಣೇಶಾಯ ನಮಃ – ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ ॥

### 2. ಆವಾಹನಂ

ಸಹಸ್ರಶೀರ್ಷಾ ಪುರುಷಃ ... ದಶಾಂಗುಲಂ ॥

ಆಗಚ್ಛ ವಿಘ್ನರಾಜೇಂದ್ರ ಸ್ಥಾನೇ ಚಾತ್ರ ಸ್ಥಿರೋಭವ ।
ಆರಾಧಯಿಷ್ಯೇ ಭಕ್ತೋಽಹಂ ಭವಂತಂ ಸರ್ವಸಿದ್ಧಿದಂ ॥

ಸಿಂಧೂರಾರುಣವರ್ಣಾಭಂ ಕುಂಕುಮಾಂಕಿತ ಮಾಲಿನಂ ।
ಸರ್ವವಿಘ್ನ ಕ್ಷಯಕರಂ ಸಿದ್ಧಿದಂ ಸರ್ವಕಾಮದಂ ॥

ವಿಘ್ನರಾಜೇಂದ್ರಾಯ ನಮಃ – ಆವಾಹಯಾಮಿ ॥

### 3. ಆಸನಂ

ಪುರುಷ ಏವೇದಂ ಸರ್ವಂ ... ಅತಿರೋಹತಿ ॥

ಅಸ್ಮಿನ್ ಸ್ಥಾನೇऽಖಿಲಾರಾಧ್ಯ ಸರ್ವಾಲಂಕಾರಭೂಷಿತ ।
ಉಪವಿಶ್ಯ ಗಣಾಧ್ಯಕ್ಷ ಕಾರ್ಯಸಿದ್ಧಿಂ ಕುರುಷ್ವಮೇ ॥

ಗೋಪ್ತಾತ್ವಂ ಸರ್ವಲೋಕಾನಾಂ ಇಂದ್ರಾದೀನಾಂ ವಿಶೇಷತಃ ।
ಭಕ್ತದಾರಿದ್ರ್ಯ ವಿಚ್ಛೇತ್ತಾ ಏಕದಂತ ನಮೋಽಸ್ತುತೇ ॥

ಚತುರ್ಭುಜಂ ಮಹಾಕಾಯಂ ಪೂರ್ಣಚಂದ್ರ ಸಮಪ್ರಭಂ ।
ಏಕದಂತಂ ಶೂರ್ಪಕರ್ಣಂ ಪೂರ್ಣಮೋದಕ ಧಾರಿಣಂ ॥

ಗಣಾಧ್ಯಕ್ಷಾಯ ನಮಃ – ರತ್ನಸಿಂಹಾಸನಂ ಸಮರ್ಪಯಾಮಿ ॥



### 4. ಪಾದ್ಯಂ

ಏತಾವಾನಸ್ಯ ... ಅಮೃತಂ ದಿವಿ ॥

ಗಣಾಧಿಪ ನಮಸ್ತೇಽಸ್ತು ಸರ್ವಸಿದ್ಧಿಕರಪ್ರಭೋ ।
ಪಾದ್ಯಂ ಗೃಹಾಣ ದೇವೇಶ ಸುರಾಸುರಸುಪೂಜಿತ ॥

ಇಂದ್ರಾದಿವಂದಿತಂ ದೇವಂ ಸಿದ್ಧಗಂಧರ್ವ ಸೇವಿತಂ ।
ಪಾದ್ಯಂ ಗೃಹಾಣ ದೇವೇಶ ವಿನಾಯಕ ನಮೋಽಸ್ತುತೇ ॥

ದೇವದೇವೇಶಾಯ ನಮಃ — ಪಾದಾರವಿಂದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ ॥

### 5. ಅರ್ಘ್ಯಂ

ತ್ರಿಪಾದೂರ್ಧ್ವ ಉದೈತ್ ... ನಶನೇ ಅಭಿ ॥

ರಕ್ತಗಂಧಾಕ್ಷತೋಪೇತಂ ರಕ್ತಪುಷ್ಪೈಃ ಸುಪೂಜಿತಂ ।
ಮಯಾದತ್ತಂ ಸುರಶ್ರೇಷ್ಠ ಸೋಮಾರ್ಧಧಾರಿಣೇ ನಮಃ ॥

గజానన ಮಹಾಕಾಯ ನಾಗಯಜ್ಞೋಪವೀತಿನೇ ।
ಸೂರ್ಯಕೋಟಿಪ್ರತೀಕಾಶ ಗೃಹಾಣಾರ್ಘ್ಯಂ ನಮೋಸ್ತುತೇ ॥

ಸೋಮಾರ್ಧಧಾರಿಣೇ ನಮಃ — ಕರಾರವಿಂದಯೋಃ ಅರ್ಘ್ಯಮರ್ಘ್ಯಂ ಸಮರ್ಪಯಾಮಿ ॥

### 6. ಆಚಮನೀಯಂ



ತಸ್ಮಾದ್ವಿರಾಳಜಾಯತ ... ಅಥೋಪುರಃ ॥

ವಿಘ್ನೇಶ ದೇವದೇವೇಶ ಸರ್ವಸಿದ್ಧಿ ಪ್ರದಾಯಕ ।
ಮಯಾದತ್ತಂ ಗಜಮುಖ ಗೃಹಾಣಾಚಮನೀಯಕಂ ॥

ಸುರಾಸುರಸಮಾರಾಧ್ಯ ಸರ್ವಸಿದ್ಧಿ ಪ್ರದಾಯಕ ।
ಮಯಾದತ್ತಂ ಸುರಶ್ರೇಷ್ಠ ಗೃಹಾಣಾಚಮನೀಯಕಂ ॥

ಗಜಮುಖಾಯ ನಮಃ — ಮುಖಾರವಿಂದೇ ಆಚಮನೀಯಮಾಚಮನಂ ಸಮರ್ಪಯಾಮಿ ॥

### ಮಧುಪರ್ಕಂ

ಪಯೋದಧಿ ಘೃತಂಚೈವ ಶರ್ಕರಾಮಧು ಸಂಯುತಂ ।
ಮಧುಪರ್ಕಂಗೃಹಾಣತ್ವಂ ಗಜವಕ್ತ್ರ ನಮೋಸ್ತುತೇ ॥

ಗಜವಕ್ತ್ರಾಯ ನಮಃ ಮಧುಪರ್ಕಂ ಸಮರ್ಪಯಾಮಿ ॥

## ಪಂಚಾಮೃತ ಸ್ನಾನಂ

1. ಕ್ಷೀರಂ — ಆಪ್ಯಾಯಸ್ವ ... ಸಂಗಥೇ ॥
ಕಾಮಧೇನು ಸಮುದ್ಭೂತಂ ಪರಮಂ ಪಾವನಂ ಪಯಃ ।
ತೇನ ಸ್ನಾನಂ ಕುರುಷ್ವ ತ್ವಂ ಹೇರಂಬ ಗಣನಾಯಕ ॥

2. ದಧಿ — ದಧಿಕ್ರಾವ್ಣೋ ... ತಾರಿಷತ್ ॥
ಚಂದ್ರಮಂಡಲ ಸಂಕಾಶಂ ಸರ್ವದೇವಪ್ರಿಯಂ ದಧಿ ।
ಸ್ನಾನಾರ್ಥಂ ತೇ ಪ್ರಯಚ್ಛಾಮಿ ಗೃಹಾಣ ಗಣನಾಯಕ ॥

3. **ಆಜ್ಯಂ** — ಘೃತಂ ಮಿಮಿಕ್ಷೆ ... (ಶುಕ್ರಮಸಿ ...)
ಆಜ್ಯಂ ಸುರಾಣಾಮಾಹಾರ ಆಜ್ಯಂ ಯಜ್ಞೇ ಪ್ರತಿಷ್ಠಿತಂ।
ಆಜ್ಯಂ ಪವಿತ್ರಂ ಪರಮಂ ಸ್ನಾನಾರ್ಥಂ ಪ್ರತಿಗೃಹ್ಯತಾಂ॥

4. **ಮಧು** — ಮಧುವಾತಾ ... ಭವಂತು ನಃ॥
ಸರ್ವೌಷಧಿ ಸಮಾಯುಕ್ತಂ ಪೀಯೂಷ ಸದೃಶಂ ಮಧು।
ಸ್ನಾನಾರ್ಥಂ ತೇ ಪ್ರಯಚ್ಛಾಮಿ ಗೃಹಾಣ ಗಿರಿಜಾಸುತ॥

5. **ಶರ್ಕರಾ** — ಸ್ವಾದುಃ ಪವಸ್ವ ... ಅದಾಭ್ಯಃ॥
ಇಕ್ಷುದಂಡ ಸಮುದ್ಭೂತ ದಿವ್ಯಶರ್ಕರಯಾ ಹ್ಯ ಹಂ।
ಸ್ನಾಪಯಾಮಿ ಮಹಾಭಕ್ತ್ಯಾ ಪ್ರೀತೋಭವ ಶಿವಾತ್ಮಜ॥

6. **ಫಲಸ್ನಾನಂ** — ಯಾಃ ಫಲಿನೀರ್ಯಾ ... ಅಂಹಸಃ॥
ಸುಫಲೈಶ್ಚ ಫಲೋದ್ಯೈರ್ವಾ ಫಲಾನಾಂ ಚ ರಸೈರ್ಯುತಂ।
ಫಲೋದಕಂ ಮಯಾದತ್ತಂ ಗೃಹಾಣ ಗಣನಾಯಕ॥

## 7. ಸ್ನಾನಂ

ಯತ್ಪುರುಷೇಣ ... ಅತನ್ವತ॥ ವಸಂತೋ ... ಹವಿಃ॥
ಗಂಗಾಜಲಸಮಾಯುಕ್ತಂ ಸುವರ್ಣಘಟಪೂರಿತಂ।
ಗೃಹಾಣತ್ವಂ ಮಯಾದತ್ತಂ ಸ್ನಾನಂ ಚ ದ್ವಿರದಾನನ॥

ಗಂಗಾದಿ ಸಲಿಲಂ ಶುದ್ಧಂ ಸುವರ್ಣಕಲಶೇ ಸ್ಥಿತಂ।
ಸುವಾಸಿತಂ ಪರಿಮಳೈಃಸ್ನಾಪಯಾಮಿ ಗಣೇಶ್ವರ॥

ದ್ವಿರದಾನನಾಯ ನಮಃ — ಸ್ನಾನಂ ಸಮರ್ಪಯಾಮಿ।
ಸ್ನಾನಾಂಗಮಾಚಮನಂ ಸಮರ್ಪಯಾಮಿ॥

## 8. ವಸ್ತ್ರಂ

ತಂ ಯಜ್ಞಂ ಬರ್ಹಿಷಿ ... ಋಷಯಶ್ಚಯೇ॥
ರಕ್ತವರ್ಣಂ ವಸ್ತ್ರಯುಗ್ಮಂ ಸರ್ವಕಾಮಾರ್ಥ ಸಿದ್ಧಯೇ।
ಮಯಾದತ್ತಂ ಗಣಾಧ್ಯಕ್ಷ ಗೃಹ್ಯತಾಮಖಿಲಾರ್ಥದ॥

ನಭಃಕಾರ್ಪಾಸಜಂ ದೇವದೇವಾಂಗಸದೃಶಂ ಪ್ರಭೋ ।
ಗೃಹಾಣ ದೇವದೇವೇಶ ವಸ್ತ್ರಯುಗ್ಮಂ ಚ ಭಕ್ತಿತಃ ॥

ದೇವದೇವೇಶಾಯ ನಮಃ - ವಸ್ತ್ರಯುಗ್ಮಂ ಸಮರ್ಪಯಾಮಿ ।
ವಸ್ತ್ರಾಂಗಮಾಚಮನಂ ಸಮರ್ಪಯಾಮಿ ॥

## 9. ಉಪವೀತಂ

ತಸ್ಮಾದ್ಯಜ್ಞಾತ್ ... ಸಂಭೃತಂ ... ಪಶೂನ್ ... ಗ್ರಾಮ್ಯಾಶ್ಚಯೇ ॥
ಧಾರಣಾರ್ಥಂ ಬ್ರಹ್ಮಸೂತ್ರಂ ಸೌವರ್ಣಂ ಚೋತ್ತರೀಯಕಂ ।
ವಕ್ರತುಂಡ ಗೃಹಾಣೇದಂ ಭಕ್ತಾನಾಂ ವರದಾಯಕ ॥

ಕುಂಕುಮಾಕ್ತಂ ಮಯಾದೇವ ಉಪವೀತಂ ಗಣಾಧಿಪ ।
ಉತ್ತರೀಯೇಣ ಸಹಿತಂ ಗೃಹಾಣ ಪರಮೇಶ್ವರ ॥

ಗಣಾಧಿಪಾಯ ನಮಃ - ಉಪವೀತಂ ಸಮರ್ಪಯಾಮಿ ।
ಉಪವೀತಾಂಗ ಮಾಚಮನಂ ಸಮರ್ಪಯಾಮಿ ॥

## (ಆಭರಣಂ)

ಸುವರ್ಣೇನ ಕೃತಂ ಹಾರಂ ಮೌಕ್ತಿಕೈಶ್ಚ ಸುಶೋಭಿತಂ ।
ಭಕ್ತ್ಯಾ ಸಮರ್ಪಿತಂ ತುಭ್ಯಂ ಭೂಷಣಂ ಪ್ರತಿಗೃಹ್ಯತಾಂ ॥
ಗುಣಶಾಲಿನೇ ನಮಃ ಸರ್ವಾಭರಣಾನಿ ಸಮರ್ಪಯಾಮಿ ॥

## 10. ಗಂಧಾನ್

ತಸ್ಮಾದ್ಯಜ್ಞಾತ್ ಸರ್ವಹುತ ಋಚಃ ... ಅಜಾಯತ ॥
ಚಂದನಾಗರು ಕರ್ಪೂರ ಕುಂಕುಮೇನ ಸಮನ್ವಿತಂ ।
ಗಂಧಂ ಗೃಹಾಣ ದೇವೇಶ ಸರ್ವಸಿದ್ಧಿ ಪ್ರದಾಯಕ ॥
ಗೋರೋಚನಂ ಚಂದನ ದೇವದಾರು ಕರ್ಪೂರ ಕೃಷ್ಣಾಗರು ನಾಗರಾಣಿ ।
ಕಸ್ತೂರಿಕಾ ಕೇಸರಮಿಶ್ರಿತಾನಿ ಯಥೋಚಿತಂ ದೇವಮಯಾರ್ಪಿತಾನಿ ॥
ಸರ್ವಸಿದ್ಧಿ ಪ್ರದಾಯಕಾಯ ನಮಃ ಗಂಧಾನ್ ಧಾರಯಾಮಿ ॥

(ಅಕ್ಷತಾನ್)

ಅಕ್ಷತಾಂಶ್ಚ ಸುರಶ್ರೇಷ್ಠ ಕುಂಕುಮಾಕ್ತಾನ್ ಸುಶೋಭನಾನ್ ।
ಗೃಹಾಣ ವಿಘ್ನರಾಜೇಂದ್ರ ರುದ್ರಪ್ರಿಯ ನಮೋಸ್ತುತೇ ।
ರುದ್ರಪ್ರಿಯಾಯ ನಮಃ ಅಕ್ಷತಾನ್ ಸಮರ್ಪಯಾಮಿ ॥



ಪುಷ್ಪಾಣಿ

ತಸ್ಮಾದಶ್ವಾ ಅಜಾಯಂತ ... ಅಜಾವಯಃ ॥
ರಕ್ತಪುಷ್ಪಾಣಿ ದೇವೇಶ ಏಕವಿಂಶತಿ ಸಂಖ್ಯಯಾ ।
ಗೃಹಾಣ ಸುಮುಖೋ ಭೂತ್ವಾ ಮಯಾದತ್ತಾನ್ಯುಮಾಸುತ ॥
ಕಮಲೋತ್ಪಲ ಕಲ್ಹಾರ ಪುನ್ನಾಗಬೃಹತೀನಿಚ ।
ನಾನಾವಿಧಾನಿ ದಿವ್ಯಾನಿ ಪುಷ್ಪಾಣಿ ಪ್ರತಿಗೃಹ್ಯತಾಂ ॥
ಉಮಾಸುತಾಯ ನಮಃ ಪುಷ್ಪೈಃ ಪೂಜಯಾಮಿ ।

ಸಿಂಧೂರಚೂರ್ಣಂ

ಉದಿತಾರುಣ ಸಂಕಾಶಂಜಪಾಕುಸುಮ ಸನ್ನಿಭಂ ।
ಸಿಂಧೂರಂ ತೇ ಪ್ರದಾಸ್ಯಾಮಿ ಭೂಷಣಾರ್ಥಂ ಪ್ರಗೃಹ್ಯತಾಂ ॥

ಕುಂಕುಮಚೂರ್ಣಂ

ಹರಿದ್ರಾ ಚೂರ್ಣಸಂಯುಕ್ತಂ ಕುಂಕುಮಂ ಕಾಮದಾಯಕಂ ।
ವಸ್ತ್ರಾಲಂಕರಣಂ ಸರ್ವಂ ದೇವತ್ವಂ ಪ್ರತಿಗೃಹ್ಯತಾಂ ॥

ಹರಿದ್ರಾಚೂರ್ಣಂ

ಹರಿದ್ರಾ ಸ್ವರ್ಣವರ್ಣಾಭಾ ಸರ್ವಸೌಭಾಗ್ಯ ದಾಯಿನೀ ।
ಸರ್ವಾಲಂಕಾರ ಮುಖ್ಯಾಹಿ ದೇವತ್ವಂ ಪ್ರತಿಗೃಹ್ಯತಾಂ ॥
ಶ್ರೀ ಸಂಕಷ್ಟಹರ ಗಣೇಶ್ವರಾಯ ನಮಃ ಕುಂಕುಮಾದಿಚೂರ್ಣಂ ಸಮರ್ಪಯಾಮಿ ॥

## ಅಥ ನಾಮಪೂಜಾಂ ಕರಿಷ್ಯೇ

ಓಂ ಸುಮುಖಾಯ ನಮಃ। ಓಂ ಏಕದಂತಾಯ ನಮಃ। ಓಂ ಕಪಿಲಾಯ ನಮಃ। ಓಂ ಗಜಕರ್ಣಕಾಯ ನಮಃ। ಓಂ ಲಂಬೋದರಾಯ ನಮಃ। ಓಂ ವಿಕಟಾಯ ನಮಃ। ಓಂ ವಿಘ್ನರಾಜಾಯ ನಮಃ। ಓಂ ಗಣಾಧಿಪಾಯ ನಮಃ। ಓಂ ಧೂಮ(ಮ್ರ)ಕೇತವೇ ನಮಃ। ಓಂ ಗಣಾಧ್ಯಕ್ಷಾಯ ನಮಃ। ಓಂ ಭಾಲಚಂದ್ರಾಯ ನಮಃ। ಓಂ ಗಜಾನನಾಯ ನಮಃ। ಶ್ರೀ ಸಂಕಷ್ಟಹರ ಗಣೇಶ್ವರಾಯ ನಮಃ

॥ ದ್ವಾದಶನಾಮಪೂರ್ವಕರಕ್ತಾಕ್ಷತಾನ್ ಸಮರ್ಪಯಾಮಿ ॥

## ಅಥ ಅಂಗಪೂಜಾಂ ಕರಿಷ್ಯೇ

ಓಂ ವಿನಾಯಕಾಯ ನಮಃ। ಪಾದೌ ಪೂಜಯಾಮಿ ॥ (ಪೂಜಯಾಮಿ ಇತಿ ಸರ್ವತ್ರ) ಈಶಪುತ್ರಾಯ ನಮಃ। ಜಾನುನೀ ॥ ಏಕದಂತಾಯ ನಮಃ। ಜಂಘೇ ॥ ವಿಕಟಾಯ ನಮಃ। ಊರೂ ॥ ಹೇರಂಬಾಯ ನಮಃ। ಕಟಿಂ ॥ ಲಂಬೋದರಾಯ ನಮಃ। ಉದರಂ ॥ ಗಣಾಧ್ಯಕ್ಷಾಯ ನಮಃ। ಹೃದಯಂ। ಸ್ಥೂಲಕಂಠಾಯ ನಮಃ ಕಂಠಂ ॥ ಸ್ಕಂದ ಪ್ರಿಯಾಯ ನಮಃ । ಸ್ಕಂಧೌ ॥ ಪಾಶಹಸ್ತಾಯನಮಃ ಹಸ್ತಾನ್ ॥ ಗಜವಕ್ತ್ರಾಯನಮಃ। ವಕ್ತ್ರಂ ॥ ಫಣಿಕುಂಡಲಾಯ ನಮಃ। ಕರ್ಣೌ ॥ ವಿಘ್ನಹರ್ತ್ರೇ ನಮಃ। ನೇತ್ರಾಣಿ ॥ ಸ್ಥೂಲನಾಸಿಕಾಯ ನಮಃ ನಾಸಿಕಾಂ ॥ ಸುಭದ್ರಾಯನಮಃ। ಲಲಾಟಂ ॥ ಸರ್ವೇಶ್ವರಾಯ ನಮಃ। ಸರ್ವಾಂಗಂ ಪೂಜಯಾಮಿ ॥

## ಆವರಣ ಪೂಜಾಂ ಕರಿಷ್ಯೇ

1. **ಪ್ರಥಮಾವರಣ ಪೂಜಾ** —

ಓಂ ಗಣಾಧಿಪಾಯನಮಃ। ಉಮಾಪುತ್ರಾಯನಮಃ। ಅಘನಾಶಿನೇನಮಃ। ಹೇರಂಬಾಯನಮಃ। ಲಂಬೋದರಾಯನಮಃ। ಗಜವಕ್ತ್ರಾಯನಮಃ। ಏಕದಂತಾಯನಮಃ। ಧೂಮ (ಮ್ರ)ಕೇತವೇನಮಃ। ಫಾಲಚಂದ್ರಾಯನಮಃ। ಈಶಪುತ್ರಾಯನಮಃ। ಇಭವಕ್ತ್ರಾಯನಮಃ। ಮೂಷಕವಾಹನಾಯನಮಃ।

ಅಭೀಷ್ಟ ಸಿದ್ಧಿಂ ಮೇ ದೇಹಿ ಶರಣಾಗತವತ್ಸಲ ।
ಭಕ್ತ್ಯಾ ಸಮರ್ಪಯೇ ತುಭ್ಯಂ ಪ್ರಥಮಾವರಣಾರ್ಚನಂ ॥
ದಯಾಬ್ಧೇತ್ರಾಹಿ ಸಂಸಾರಸರ್ಪಾನ್ಮಾಂ ಶರಣಾಗತಂ ।
ಭಕ್ತ್ಯಾ ಸಮರ್ಪಯೇತುಭ್ಯಂ ಪ್ರಥಮಾವರಣಾರ್ಚನಂ ॥

2. **ದ್ವಿತೀಯಾವರಣ ಪೂಜಾ** —

ಓಂ ವಿಘ್ನಗಣಪತಯೇನಮಃ । ವೀರಗಣಪತಯೇ ನಮಃ । ಶೂರಗಣಪತಯೇ ನಮಃ । ಪ್ರಸಾದ ಗಣಪತಯೇ ನಮಃ । ವರದಗಣಪತಯೇನಮಃ । ಲಂಬೋದರಗಣಪತಯೇನಮಃ । ಕ್ಷಿಪ್ರಗಣಪತಯೇನಮಃ । ಸಿದ್ಧಿಗಣಪತಯೇ ನಮಃ ॥

ದಯಾಬ್ಧೇ ... ದ್ವಿತೀಯಾವರಣಾರ್ಚನಂ ॥

3. **ತೃತೀಯಾವರಣ ಪೂಜಾ** —

ಓಂ ರಮಾಯೈನಮಃ । ರಮೇಶಾಯನಮಃ । ಗಿರಿಜಾಯೈನಮಃ । ವೃಷಾಂಕಾಯನಮಃ । ರತ್ಯೈ ನಮಃ । ಪುಷ್ಪಬಾಣಾಯನಮಃ । ಸಿದ್ಧ್ಯೈ ನಮಃ । ವಿನಾಯಕಾಯನಮಃ । ಮಹ್ಯೈನಮಃ । ವರಾಹಾಯನಮಃ । ಸದಾಶಿವಾಯನಮಃ ।

ದಯಾಬ್ಧೇ ... ತೃತೀಯಾವರಣಾರ್ಚನಂ ॥

4. **ಚತುರ್ಥಾವರಣ ಪೂಜಾ** —

ಓಂ ಆದಿತ್ಯಾಯನಮಃ । ಚಂದ್ರಮಸೇನಮಃ । ಅಂಗಾರಕಾಯನಮಃ । ಬುಧಾಯನಮಃ । ಬೃಹಸ್ಪತಯೇ ನಮಃ । ಶುಕ್ರಾಯನಮಃ । ಶನೈಶ್ಚರಾಯನಮಃ । ರಾಹವೇನಮಃ । ಕೇತವೇನಮಃ । ಸಿದ್ಧ್ಯೈ ನಮಃ । ಸಮೃದ್ಧ್ಯೈ ನಮಃ । ಕಾಂತ್ಯೈನಮಃ । ಮದನವತ್ಯೈ ನಮಃ । ಮದದ್ರವಾಯೈನಮಃ । ದ್ರಾವಿಣ್ಯೈ ನಮಃ । ವಸುಧಾರಾಯೈನಮಃ । ವಸುಮತ್ಯೈನಮಃ । ವಿನಾಯಕಾಯನಮಃ ॥

ದಯಾಬ್ಧೇ ... ಚತುರ್ಥಾವರಣಾರ್ಚನಂ ॥

**5. ಪಂಚಮಾವರಣ ಪೂಜಾ—**

ಓಂ ಇಂದ್ರಾಯ ಸುರಾಧಿಪತಯೇ ನಮಃ। ಅಗ್ನಯೇ ತೇಜೋಧಿಪತಯೇ ನಮಃ। ಯಮಾಯ ಪ್ರೇತಾಧಿಪತಯೇ ನಮಃ। ನಿರ್ಋತಯೇ ರಕ್ಷೋಧಿಪತಯೇ ನಮಃ। ವರುಣಾಯ ಜಲಾಧಿಪತಯೇ ನಮಃ। ವಾಯವೇ ಪ್ರಾಣಾಧಿಪತಯೇ ನಮಃ। ಸೋಮಾಯ ನಕ್ಷತ್ರಾಧಿಪತಯೇ ನಮಃ। ಈಶಾನಾಯ ವಿದ್ಯಾಧಿಪತಯೇ ನಮಃ। ಅನಂತಾಯ ನಾಗಾಧಿಪತಯೇನಮಃ। ಬ್ರಹ್ಮಣೇಲೋಕಾಧಿಪತಯೇ ನಮಃ।

ದಯಾಬ್ಧೇ...ಪಂಚಮಾವರಣಾರ್ಚನಂ ॥

**6. ಷಷ್ಠಾವರಣ ಪೂಜಾ—**

ಓಂ ವಜ್ರಾಯನಮಃ। ಶಕ್ತಯೇ ನಮಃ। ದಂಡಾಯನಮಃ। ಖಡ್ಗಾಯ ನಮಃ। ಪಾಶಾಯನಮಃ। ಅಂಕುಶಾಯನಮಃ। ಗದಾಯೈ ನಮಃ। ತ್ರಿಶೂಲಾಯ ನಮಃ। ಚಕ್ರಾಯನಮಃ। ಪದ್ಮಾಯನಮಃ। ಮಂಮಹಾಚಾಪಾಯನಮಃ। ಕುಂಕುಂಭೋದರಾಯನಮಃ

ದಯಾಬ್ಧೇ......ಸುಷಷ್ಠಾವರಣಾರ್ಚನಂ ॥

ಶ್ರೀ ಸಂಕಷ್ಟಹರಗಣೇಶ್ವರಾಯನಮಃ ಆವರಣ ಪೂಜಾಂ ಸಮರ್ಪಯಾಮಿ ॥ ಪತ್ರಪೂಜಾಂ ಕರಿಷ್ಯೇ-

ಪ್ರಮಥಗಣಪತಯೇನಮಃ ಪುನ್ನಾಗಪತ್ರಂ ಸಮರ್ಪಯಾಮಿ। ಪಂಚಾಸ್ಯಗಣಪತಯೇನಮಃ ಜಾತೀಪತ್ರಂ। ಗಜಾಸ್ಯಗಣಪತಯೇನಮಃ ಸೇವಂತಿಕಾಪತ್ರಂ। ಧೀರಗಣಪತಯೇನಮಃ ಸುಗಂಧರಾಜ ಪತ್ರಂ। ವೀರಗಣಪತಯೇನಮಃ ಮಲ್ಲಿಕಾ ಪತ್ರಂ। ಕಂದರ್ಪಗಣಪತಯೇ ನಮಃ ಕೇತಕೀಪತ್ರಂ । ಶಕ್ತಿಗಣಪತಯೇನಮಃ ಚಂಪಕಾಪತ್ರಂ। ವಿಶ್ವಕ್ಸೇನಗಣಪತಯೇನಮಃ ಬಕುಳಪತ್ರಂ। ಆಮೋದ ಗಣಪತಯೇನಮಃ ಪಾಟಲೀಪತ್ರಂ। ರುದ್ರಗಣಪತಯೇನಮಃ ದ್ರೋಣಪತ್ರಂ। ವಿಘ್ನಗಣಪತಯೇನಮಃ ರಸಾಲಪತ್ರಂ। ಏಕದಂತಗಣಪತಯೇ ನಮಃ ಪ್ರವಾಳ ಪತ್ರಂ। ದುರಿತ ಹರಗಣಪತಯೇ ನಮಃ ಕಮಲಪತ್ರಂ। ಲಂಬೋದರಗಣಪತಯೇನಮಃ ಕಲ್ಹಾರಪತ್ರಂ। ಪ್ರಸಾದಗಣಪತಯೇನಮಃ ನೀಲೋತ್ಪಲಪತ್ರಂ।

ಭಕ್ತವತ್ಸಲಗಣಪತಯೇನಮಃ ಧುತ್ತೂರಪತ್ರಂ । ಬ್ರಹ್ಮಗಣಪತಯೇನಮಃ ದಾಡಿಮೀ ಪತ್ರಂ । ವಿಷ್ಣುಗಣಪತಯೇನಮಃ ಪಾರಿಜಾತಪತ್ರಂ । ಈಶಗಣಪತಯೇನಮಃ ಯೂಥಿಕಾಪತ್ರಂ । ಕ್ಷಿಪ್ರಪ್ರಸಾದಗಣಪತಯೇನಮಃ ಕರವೀರಪತ್ರಂ । ಸಂಕಷ್ಟ ಹರಗಣಪತಯೇನಮಃ ಶ್ವೇತಾರ್ಕಪತ್ರಂ ಸಮರ್ಪಯಾಮಿ ॥ ಪತ್ರಪೂಜಾಂ ಸಮರ್ಪಯಾಮಿ ॥ ಪುಷ್ಪಪೂಜಾಂ ಕರಿಷ್ಯೇ —

ಓಂ ಸುಮುಖಾಯನಮಃ ದಾಡಿಮೀಪುಷ್ಪಂ ಸಮರ್ಪಯಾಮಿ । ಏಕದಂತಾಯ ನಮಃ ಯೂಥಿಕಾಪುಷ್ಪಂ । ಕಪಿಲಾಯನಮಃ ಮಲ್ಲಿಕಾಪುಷ್ಪಂ । ಗಜಕರ್ಣಕಾಯ ನಮಃ ಚಂಪಕಾಪುಷ್ಪಂ । ಲಂಬೋದರಾಯನಮಃ ಕಲ್ಹಾರಪುಷ್ಪಂ । ವಿಕಟಾಯ ನಮಃ ಕೇತಕೀಪುಷ್ಪಂ । ವಿಘ್ನನಾಶಿನೇನಮಃ ಬಕುಳಪುಷ್ಪಂ । ಧೂಮ(ಮ್ರ) ಕೇತವೇನಮಃ ಶತಪತ್ರ ಪುಷ್ಪಂ । ಗಣಾಧ್ಯಕ್ಷಾಯನಮಃ ಚೂತಪುಷ್ಪಂ । ಭಾಲ ಚಂದ್ರಾಯನಮಃ ನಂದ್ಯಾವರ್ತಪುಷ್ಪಂ । ಗಜಾನನಾಯನಮಃ ಕುಮುದಪುಷ್ಪಂ । ಗುಹಾಗ್ರಜಾಯನಮಃ ಅಶೋಕಪುಷ್ಪಂ । ಭಕ್ತಪ್ರಿಯಾಯನಮಃ ಜಾತೀಪುಷ್ಪಂ । ಸರ್ವಸಿದ್ಧಿ ಪ್ರದಾಯಕಾಯನಮಃ ಕರ್ಣಿಕಾರಪುಷ್ಪಂ । ಗಣಂಜಯಾಯನಮಃ ಅರ್ಕಪುಷ್ಪಂ । ಹೇರಂಬಾಯನಮಃ ಬದರೀಪುಷ್ಪಂ । ಮೂಷಕವಾಹನಾಯನಮಃ ಪಾರಿಜಾತಪುಷ್ಪಂ । ಕುಮಾರಗುರವೇನಮಃ ಜಂಬೀರಪುಷ್ಪಂ । ರುದ್ರಪ್ರಿಯಾಯ ನಮಃ ಕಮಲಪುಷ್ಪಂ । ನಾಗಯಜ್ಞೋಪವೀತಿನೇ ನಮಃ ನಾಗಲಿಂಗಪುಷ್ಪಂ ಸಮರ್ಪಯಾಮಿ ॥ ಪುಷ್ಪಪೂಜಾಂ ಸಮರ್ಪಯಾಮಿ ॥

ಅಥ ಶ್ವೇತಾರ್ಕ ಪುಷ್ಪ ಪೂಜಾಂ ಕರಿಷ್ಯೇ—ಓಂ ಗಣಾಧಿಪಾಯನಮಃ ಶ್ವೇತಾರ್ಕ ಪುಷ್ಪ ಪೂಜಾಂ ಸಮರ್ಪಯಾಮಿ । (ಏವಂ ಸರ್ವತ್ರ) ಉಮಾಪುತ್ರಾಯನಮಃ । ಅಭಯಪ್ರದಾಯನಮಃ । ಏಕದಂತಾಯನಮಃ । ಇಭವಕ್ತ್ರಾಯ ನಮಃ । ಮೂಷಕವಾಹನಾಯನಮಃ । ವಿನಾಯಕಾಯನಮಃ । ಈಶಪುತ್ರಾಯ ನಮಃ । ಲಂಬೋದರಾಯನಮಃ । ವಕ್ರತುಂಡಾಯನಮಃ । ಅಘನಾಶನಾಯ ನಮಃ । ವಿಘ್ನವಿಧ್ವಂಸಕರ್ತ್ರೇ ನಮಃ । ವಿಶ್ವವಂದ್ಯಾಯನಮಃ । ಅಮರೇಶ್ವರಾಯ ನಮಃ । ಗಜವಕ್ತ್ರಾಯನಮಃ । ನಾಗಯಜ್ಞೋಪವೀತಿನೇನಮಃ । ಭಾಲಚಂದ್ರಾಯ ನಮಃ । ಪರಶುಧಾರಿಣೇನಮಃ । ವಿಘ್ನಾಧಿಪಾಯನಮಃ । ಸರ್ವವಿದ್ಯಾಪ್ರದಾಯ ಕಾಯನಮಃ । ಶ್ರೀಸಂಕಷ್ಟಹರಗಣೇಶ್ವರಾಯನಮಃ । ಏಕವಿಂಶತಿನಾಮಪೂರ್ವಕ ಶ್ವೇತಾರ್ಕ ಪುಷ್ಪ ಪೂಜಾಂ ಸಮರ್ಪಯಾಮಿ ॥

**ಅಥ ಅಷ್ಟೋತ್ತರ ಶತನಾಮಪೂರ್ವಕ ರಕ್ತ ಪುಷ್ಪಾಕ್ಷತಾರ್ಚನಂ ಕರಿಷ್ಯೇ**

1) ಓಂ ವಿನಾಯಕಾಯನಮಃ। 2) ಓಂ ವಿಘ್ನರಾಜಾಯನಮಃ। 3) ಗೌರೀಪುತ್ರಾಯನಮಃ। 4) ಗಣಾಧಿಪಾಯನಮಃ। 5) ಸ್ಕಂದಾಗ್ರಜಾಯನಮಃ। 6) ಅವ್ಯಯಾಯನಮಃ। 7) ಪೂತಾಯನಮಃ। 8) ದಕ್ಷಾಧ್ಯಕ್ಷಾಯನಮಃ। 9) ದ್ವಿಜಪ್ರಿಯಾಯನಮಃ। 10) ಅಗ್ನಿಗರ್ವಚ್ಛಿದೇವನಮಃ। 11) ಇಂದ್ರ ಶ್ರೀಪ್ರದಾಯ ನಮಃ। 12) ವಾಣೀಬಲಪ್ರದಾಯನಮಃ। 13) ಸರ್ವಸಿದ್ಧಿಪ್ರದಾಯನಮಃ। 14) ಶರ್ವತನಯಾಯನಮಃ। 15) ಶರ್ವರೀಪತಯೇನಮಃ। 16) ಸರ್ವಾತ್ಮಕಾಯ ನಮಃ। 17) ಸೃಷ್ಟಿಕರ್ತ್ರೇನಮಃ 18) ದೇವಾನೀಕಾರ್ಚಿತಾಯನಮಃ 19) ಶಿವಾಯನಮಃ। 20) ಶುದ್ಧಾಯನಮಃ। 21) ಬುದ್ಧಿಪ್ರದಾಯನಮಃ। 22) ಶಾಂತಾಯನಮಃ। 23) ಬ್ರಹ್ಮಚಾರಿಣೇನಮಃ। 24) ಗಜಾನನಾಯನಮಃ। 25) ದ್ವೈಮಾತುರಾಯನಮಃ। 26) ಮುನಿಸ್ತುತ್ಯಾಯನಮಃ। 27) ಭಕ್ತವಿಘ್ನವಿನಾಶಕಾಯನಮಃ।28) ಏಕದಂತಾಯನಮಃ। 29) ಚತುರ್ಬಾಹವೇನಮಃ। 30) ಚತುರಾಯನಮಃ। 31) ಶಕ್ತಿಸಂಯುತಾಯನಮಃ। 32) ಲಂಬೋದರಾಯ ನಮಃ। 33) ಶೂರ್ಪಕರ್ಣಾಯನಮಃ। 34) ಹೇರಂಬಾಯನಮಃ। 35) ಬ್ರಹ್ಮವಿತ್ತಮಾಯನಮಃ। 36) ಕಾಲಾಯನಮಃ। 37) ಗ್ರಹಪತಯೇನಮಃ। 38) ಕಾಮಿನೇನಮಃ। 39) ಸೋಮಸೂರ್ಯಾಗ್ನಿಲೋಚನಾಯನಮಃ। 40) ಪಾಶಾಂಕುಶಧರಾಯನಮಃ। 41) ಚಂಡಾಯನಮಃ। 42) ಗುಣಾತೀತಾಯ ನಮಃ। 43) ನಿರಂಜನಾಯನಮಃ। 44) ಅಕಲ್ಮಷಾಯನಮಃ। 45) ಸ್ವಯಂ ಸಿದ್ಧಾಯನಮಃ। 46) ಸಿದ್ಧಾರ್ಚಿತಪದಾಂಬುಜಾಯನಮಃ। 47) ಬೀಜಾಪೂರಕರಾಯನಮಃ। 48) ಅವ್ಯಕ್ತಾಯನಮಃ। 49) ವರದಾಯನಮಃ। 50) ಶಾಶ್ವತಾಯನಮಃ। 51) ಕೃತಿನೇನಮಃ। 52) ವಿದ್ವತ್ಪ್ರಿಯಾಯನಮಃ। 53) ವೀತಭಯಾಯನಮಃ। 54) ಗದಿನೇನಮಃ। 55) ಚಕ್ರಿಣೇನಮಃ। 56) ಇಕ್ಷುಚಾಪಧೃಪೇ ನಮಃ। 57) ಅಬ್ಜೋತ್ಪಲಕರಾಯನಮಃ। 58) ಶ್ರೀದಾಯನಮಃ। 59) ಶ್ರೀಪತಯೇನಮಃ। 60) ಸ್ತುತಿಹರ್ಷಿತಾಯನಮಃ। 61) ಕುಲಾದ್ರಿಭೇತ್ತ್ರೇನಮಃ। 62) ಜಟಿಲಾಯನಮಃ। 63) ಚಂದ್ರಚೂಡಾಯನಮಃ। 64) ಅಮರೇಶ್ವರಾಯ ನಮಃ। 65) ನಾಗೋಪವೀತಿನೇನಮಃ। 66) ಶ್ರೀಕಂಠಾರ್ಚಿತಾಯನಮಃ। 67)

ರಾ ಮಾರ್ಚಿತಾಯನಮಃ । 68) ಪ್ರತಿನೇನಮಃ । 69) ಸ್ಥೂಲಕಂಠಾಯನಮಃ । 70) ತ್ರಯೀಕರ್ತ್ರೇನಮಃ । 71) ಸಾಮಘೋಷಪ್ರಿಯಾಯನಮಃ । 72) ಕವಯೇ ನಮಃ । 73) ಸ್ಥೂಲತುಂಡಾಯನಮಃ । 74) ಅಗ್ರಣ್ಯೇನಮಃ । 75) ಧೀರಾಯ ನಮಃ । 76) ಗ್ರಾಮಣ್ಯೇನಮಃ । 77) ಗಣಪಾಯನಮಃ । 78) ಸ್ಥಿರಾಯನಮಃ । 79) ವೃದ್ಧಿದಾಯನಮಃ । 80) ಸುಭಗಾಯನಮಃ । 81) ಶೂರಾಯನಮಃ । 82) ವಾಗೀಶಾಯನಮಃ । 83) ಸಿದ್ಧಿದಾಯಕಾಯನಮಃ । 84) ದೂರ್ವಾಬಿಲ್ವಪ್ರಿಯಾಯನಮಃ । 85) ಶಂತಾಯನಮಃ । 86) ಪಾಪಹಾರಿಣೇನಮಃ । 87) ಸಮಾಶ್ರಿತಾಯನಮಃ । 88) ಆಶ್ರಿತಶ್ರೀಪ್ರದಾಯನಮಃ । 89) ಸೌಮ್ಯಾಯನಮಃ । 90) ಭಕ್ತಕಾಂಕ್ಷಿತದಾಯಕಾಯನಮಃ । 91) ಅಚ್ಯುತಾಯನಮಃ । 92) ಕೇವಲಾಯ ನಮಃ । 93) ಸಿದ್ಧಾಯನಮಃ । 94) ಸಚ್ಚಿದಾನಂದವಿಗ್ರಹಾಯನಮಃ । 95) ಜ್ಞಾನಿನೇನಮಃ । 96) ಮಾಯಾಯುತಾಯನಮಃ । 97) ದಾಂತಾಯನಮಃ । 98) ಬ್ರಹ್ಮಿಷ್ಠಾಯನಮಃ । 99) ಭಯವರ್ಜಿತಾಯನಮಃ । 100) ಪ್ರಮತ್ತ ದೈತ್ಯಭಯದಾಯನಮಃ । 101) ವ್ಯಕ್ತಮೂರ್ತಯೇನಮಃ । 102) ಅಮೂರ್ತಿಮತೇನಮಃ । 103) ಪಾರ್ವತೀಶಂಕರೋತ್ಸಂಗ ಖೇಲನೋತ್ಸುಕಲಾಲಸಾಯನಮಃ । 104) ಸಮಸ್ತಜಗದಾಧಾರಾಯನಮಃ । 105) ವರಮೂಷಕವಾಹನಾಯನಮಃ । 106) ಹೃಷ್ಟಚಿತ್ತಾಯನಮಃ । 107) ಪ್ರಸನ್ನಾತ್ಮನೇನಮಃ । 108) ಸರ್ವಸಿದ್ಧಿಪ್ರದಾಯಕಾಯ ನಮಃ ।

ಶ್ರೀ ಸಂಕಷ್ಟಹರ ಗಣೇಶ್ವರಾಯನಮಃ ।
ಅಷ್ಟೋತ್ತರ ಶತನಾಮ ಪೂರ್ವಕ ರಕ್ತಪುಷ್ಪಾಕ್ಷತಾರ್ಚನಂ ಸಮರ್ಪಯಾಮಿ ॥

### 11. ಧೂಪಃ

ಯತ್ಪುರುಷಂ...ಉಚ್ಯತೇ ॥

ದಶಾಂಗಂ ಗುಗ್ಗುಲಂ ಧೂಪಮುತ್ತಮಂ ಗಣನಾಯಕ
ಗೃಹಾಣ ದೇವದೇವೇಶ ಉಮಾಸುತ ನಮೋಸ್ತುತೇ ॥
ವನಸ್ಪತಿರಸೈರ್ದಿವ್ಯೈರ್ಗಂಧಾಢ್ಯೈರ್ಗಂಧ ಉತ್ತಮೈಃ
ಆಘ್ರೇಯಃ ಸರ್ವದೇವಾನಾಂ ಧೂಪೋಯಂ ಪ್ರತಿಗೃಹ್ಯತಾಂ ॥
ವಿಕಟಾಯನಮಃ-ದಿವ್ಯಧೂಪಮಾಘ್ರಾಪಯಾಮಿ

## 12. ದೀಪಂ

ಬ್ರಾಹ್ಮಣೋಸ್ಯ...ಅಜಾಯತ ॥

ಸರ್ವಜ್ಞ ಸರ್ವ ರತ್ನಾಢ್ಯ ಸರ್ವೇಶ ವಿಬುಧಪ್ರಿಯ
ಗೃಹಾಣ ಮಂಗಲಂ ದೀಪಂ ಘೃತವರ್ತಿ ಸಮನ್ವಿತಂ ॥
ಘೃತಾಕ್ತವರ್ತಿ ಸಂಯುಕ್ತಂ ದೀಪಂ ಜ್ಞಾನಪ್ರಕಾಶಕಂ
ಗೃಹಾಣೇದಂ ಮಯಾದತ್ತಂ ತೇಜೋರಾಶೇ ಜಗತ್ಪತೇ ॥
ವಾಮನಾಯನಮಃ ದೀಪಂ ದರ್ಶಯಾಮಿ ॥

## 13. ನೈವೇದ್ಯಂ

ಚಂದ್ರಮಾ ಮನಸೋ ... ರಜಾಯತ

ನೈವೇದ್ಯಂ ಗೃಹ್ಯತಾಂ ದೇವ ನಾನಾಮೋದಕ ಸಂಯುತಂ ।
ಪಕ್ವಾನ್ನ ಫಲ ಸಂಯುಕ್ತಂ ಷಡ್ರಸೈಶ್ಚ ಸಮನ್ವಿತಂ ।
ಭಕ್ಷೈರ್ನಾನಾವಿಧೈರ್ದಿವ್ಯೈರ್ಮೋದಕಾನ್ ಘೃತ ಪಾಚಿತಾನ್ ।
ಗೃಹಾಣೇದಂ ಮಯಾದತ್ತಂ ನೈವೇದ್ಯಂ ಸರ್ವಸಿದ್ಧಿದ ॥
ಅನ್ನಂ ಚತುರ್ವಿಧಂ ಸ್ವಾದು ರಸೈಃ ಷಡ್ಭಿಃ ಸಮನ್ವಿತಂ ।
ಭಕ್ತ್ಯಾನಿವೇದಿತಂ ದೇವ ನೈವೇದ್ಯಂ ಪ್ರತಿಗೃಹ್ಯತಾಂ ॥
ಸರ್ವದೇವಾಯನಮಃ — ನೈವೇದ್ಯಂ ಸಮರ್ಪಯಾಮಿ ॥

ಸುಗೌತಮೀ ಕೃಷ್ಣವೇಣಿ ಪಯೋಷ್ಣೀನರ್ಮದಾ ಜಲೈಃ ।
ಆಚಮ್ಯತಾಂ ವಿಘ್ನರಾಜ ಪ್ರಸನ್ನೋಭವಸರ್ವದಾ ॥
ಮಧ್ಯೇ ಮಧ್ಯೇ ಆಚಮನೀಯಂ ಸಮರ್ಪಯಾಮಿ ॥

ಫಲಾನ್ಯಮೃತ ಕಲ್ಪಾನಿ ಸುಗಂಧೀನ್ಯಘನಾಶನ ।
ಆನೀತಾನಿ ಯಥಾಶಕ್ತಿ ಗೃಹಾಣ ಗಣನಾಯಕ ॥
ಫಲಾನೀಮಾನಿ ರಮ್ಯಾಣಿ ಸ್ಥಾಪಿತಾನಿ ತವಾಗ್ರತಃ ।
ತೇನಮೇ ಸುಫಲಾವಾಪ್ತಿರ್ಭವೇಜ್ಜನ್ಮನಿ ಜನ್ಮನಿ ॥
ಸರ್ವಾರ್ತಿನಾಶಿನೇನಮಃ — ಪೂರ್ಣಫಲಾನಿ ಸಮರ್ಪಯಾಮಿ ॥

ತಾಂಬೂಲಂ ಗೃಹ್ಯತಾಂ ದೇವ ನಾಗವಲ್ಯಾ ದಳೈರ್ಯುತಂ ।
ಕರ್ಪೂರೈಲಾಸಮಾಯುಕ್ತಂ ಸುಗಂಧಂ ಮುಖಭೂಷಣಂ ॥
ವಿಘ್ನಹರ್ತ್ರೇನಮಃ — ತಾಂಬೂಲಂ ಸಮರ್ಪಯಾಮಿ ॥

ಸರ್ವದೇವಾಧಿದೇವತ್ವಂ ಸರ್ವಸಿದ್ಧಿ ಪ್ರದಾಯಕ ।
ಭಕ್ತ್ಯಾದತ್ತಾಂಮಯಾದೇವ ಸ್ವೀಕುರುಸ್ವರ್ಣದಕ್ಷಿಣಾಂ ॥
ಸರ್ವೇಶ್ವರಾ ಯನಮಃ — ಸುವರ್ಣ ದಕ್ಷಿಣಾಂ ಸಮರ್ಪಯಾಮಿ ॥

ಪಂಚವರ್ತಿ ಸಮಾಯುಕ್ತಂ ವಹ್ನಿನಾಯೋಜಿತಂಮಯಾ ।
ಗೃಹಾಣ ಮಂಗಳಂ ದೀಪಂ ವಿಘ್ನರಾಜ ನಮೋಸ್ತುತೇ ॥
ಅಜ್ಞಾನಾಂಧಕಾರನಿವಾರಣಾಯನಮಃ — ಕರ್ಪೂರ ಮಂಗಳ
ನೀರಾಜನಂ ಸಮರ್ಪಯಾಮಿ ॥

## ಸುವರ್ಣದಕ್ಷಿಣಾ

ಪೂಜಾಫಲಸಮೃದ್ಧ್ಯರ್ಥಂ ತವಾಗ್ರೇ ಸ್ವರ್ಣಮೀಶ್ವರ ।
ಸ್ಥಾಪಿತಂ ತೇನ ಮೇಪ್ರೀತಃ ಪೂರ್ಣಾನ್ಕುರು ಮನೋರಥಾನ್
ತತಃಸ್ವರ್ಣಮಯಂ ಪುಷ್ಪಂ ವಿಶ್ವೇಶಾಯ ನಿವೇದಯೇತ್ ॥
ಶ್ರೀಸಂಕಷ್ಟಹರಗಣೇಶ್ವರಾ ಯ ನಮಃ — ಸುವರ್ಣ ದಕ್ಷಿಣಾಂ ಸಮರ್ಪಯಾಮಿ ॥

## ಅಥ ದೂರ್ವಾಯುಗ್ಮಪೂಜಾಂ ಕರಿಷ್ಯೇ

| | | | | |
|---|---|---|---|---|
| 1. ಓಂ ಶ್ರೀ ಗಣೇಶಾಯನಮಃ | ದೂರ್ವಾಯುಗ್ಮ ಪೂಜಾಂ ಸಮರ್ಪಯಾಮಿ । | | | |
| 2. ,, ವಕ್ರತುಂಡಾಯನಮಃ | | ,, | ,, | ,, |
| 3. ,, ಉಮಾಪುತ್ರಾಯನಮಃ | | ,, | ,, | ,, |
| 4. ,, ವಿಘ್ನರಾಜಾಯನಮಃ | | ,, | ,, | ,, |
| 5. ,, ಗಣೇಶ್ವರಾ ಯನಮಃ | | ,, | ,, | ,, |
| 6. ,, ಕಾಮದಾಯನಮಃ | | ,, | ,, | ,, |
| 7. ,, ಜೀಮೂತಾಯನಮಃ | | ,, | ,, | ,, |
| 8. ,, ಶಕ್ತಿಯುಕ್ತಾಯನಮಃ | | ,, | ,, | ,, |

9. " ಅಂಜನಸಮಪ್ರಭಾಯನಮಃ " " "
10. " ಯೋಗಿ ಧ್ಯೇಯಾಯನಮಃ " " "
11. " ದಿವ್ಯಗುಣಾಯನಮಃ " " "
12. " ಮಹಾಕಾಯಾಯನಮಃ " " "
13. " ಗಜವಕ್ತ್ರಾಯನಮಃ " " "
14. " ಭೀಮಾಯನಮಃ " " "
15. " ಉಗ್ರಾಯನಮಃ " " "
16. " ಪರಶುಧಾರಿಣೇನಮಃ " " "
17. " ಕರಿಜಿಹ್ವಾಯನಮಃ " " "
18. " ವಿಶ್ವಮೂರ್ತಯೇನಮಃ " " "
19. " ಉಗ್ರತೇಜಸೇನಮಃ " " "
20. " ಲಂಬೋದರಾ ಯನಮಃ " " "
21. " ಸಿದ್ಧಯೇನಮಃ " " "

ಶ್ರೀ ಸಂಕಷ್ಟಹರಗಣೇಶ್ವರಾಯನಮಃ ದೂರ್ವಾಯುಗ್ಮಪೂಜಾಂ ಸಮರ್ಪಯಾಮಿ ॥

## ಅಥ ಮಂತ್ರ ಪುಷ್ಪಂ

ನಮೋ ನರಗಜಾಕೃತೇ, ನಲಿನವರ್ಣದೇಹಾಕೃತೇ ।
ನರಾ-ಸುರ ಸುರೇಡಿತ, ಶ್ರುತಿಶಿರೋದ್ಯದಂಘ್ರಿದ್ವಯ ॥
ನಗೇಶ್ವರ-ವರಾ ತ್ಮಜಾ-ನಯನಪದ್ಮ-ಭಾನೋನಮಃ ।
ನತಾರ್ತಿಹರಣಾಂಘ್ರಿಯುಕ್ ಕಲಿತಏಷ ಪುಷ್ಪಾಂಜಲಿಃ ॥

ಶಕ್ರಾದಿಭಿಃ ಪೂಜಿತಾಯನಮಃ ಮಂತ್ರಪುಷ್ಪಂ ಸಮರ್ಪಯಾಮಿ ॥

## 14. ಪ್ರದಕ್ಷಿಣಂ

ನಾಭ್ಯಾ ಆಸೀದಂತರಿಕ್ಷಂ ... ಅಕಲ್ಪಯತ್,
ಯಾನಿ ಕಾನಿಚಪಾಪಾನಿ ... ಪದೇ ಪದೇ ॥
ನಮೋನಮಸ್ತೇ ವಿಘ್ನೇಶ ಸರ್ವವಿಘ್ನಂನಿವಾರಯ ।

ನಮಸ್ಕರೋಮಿ ವಿಘ್ನೇಶ ಸರ್ವಕಾಮಾರ್ಥ ಸಿದ್ಧಯೇ ॥
ವಿಘ್ನೇಶ್ವರಾಯನಮಃ ಪ್ರದಕ್ಷಿಣಂ ಸಮರ್ಪಯಾಮಿ ॥

## 15. ನಮಸ್ಕಾರಾಃ

ಸಪ್ತಾಸ್ಯಾಸನ್ ... ಪುರುಷಂ ಪಶುಂ
ನಮಸ್ಕರೋಮಿ ದೇವೇಶ ಸರ್ವವಿಘ್ನಹರೋಭವ ।
ಶೀಘ್ರಂಮಮ ವರಂದೇಹಿ ಪರತ್ರ ಚ ಪರಾಂ ಗತಿಂ ॥
ವಿಘ್ನಾವಿನಾಶಮಾಯಾಂತು ಸರ್ವೇಚ ಸುರಪೂಜಿತ ।
ಕಾರ್ಯಂಮೇ ಸಿದ್ಧಿಮಾಯಾತು ಪೂಜಾನಾಥ ವಿನಾಯಕ ॥
ವಿಘ್ನಹಂತ್ರೇನಮಃ ನಮಸ್ಕರಾನ್ ಸಮರ್ಪಯಾಮಿ ॥

## 16. ಸುವರ್ಣದಕ್ಷಿಣಾ

ಯಜ್ಞೇನ ಯಜ್ಞಂ ... ದೇವಾಃ
ಶ್ರೀಸಂಕಷ್ಟಹರಗಣೇಶ್ವರಾಯ ನಮಃ
ಸುವರ್ಣ ದಕ್ಷಿಣಾಂ ಸಮರ್ಪಯಾಮಿ ।
ಗೃಹಾಣ ಪಾದುಕೇ ದಿವ್ಯೇ ಸರತ್ನೇ ಛತ್ರಚಾಮರೇ ।
ದರ್ಪಣಂ ವ್ಯಜನಂ ಚೈವ ರಾಜಭೋಗಾಯ ಕಲ್ಪಿತಂ ॥
ಯಥಾಶಕ್ತಿ ರಾಜೋಪಚಾರ ಪೂಜಾಂ ಸಮರ್ಪಯಾಮಿ ॥
ತತಃ 21 ವಾರಂ ಮೂಲಮಂತ್ರ ಜಪಂಕುರ್ಯಾತ್ ॥

## ಅಥ ಪ್ರಸನ್ನಾರ್ಘ್ಯಂ

ಕ್ಷೀರಸಾಗರಸಂಭೂತ ಸುಧಾರೂಪ ನಿಶಾಕರ ।
ಗೃಹಾಣಾರ್ಘ್ಯಂ ಮಯಾದತ್ತಂ ಗಣೇಶ ಪ್ರೀತಿವರ್ಧನ ।
ರೋಹಿಣೀಸಹಿತ ಚಂದ್ರಮಸೇನಮಃ ಇದ ಮರ್ಘ್ಯಂ ।
ಕ್ಷೀರೋದಾರ್ಣವಸಂಭೂತ ಲಕ್ಷ್ಮೀ ಬಂಧೋ ನಿಶಾಕರ ।
ಗೃಹಾಣಾರ್ಘ್ಯಂ ಮಯಾದತ್ತಂ ರೋಹಿಣ್ಯಾ ಸಹಿತ ಪ್ರಭೋ ॥
ರೋಹಿಣೀ ಸಹಿತ ಚಂದ್ರಮಸೇನಮಃ-ಇದಮರ್ಘ್ಯಂ ।

## ಚಂದ್ರ ನಮಸ್ಕಾರ

ಗಗನಾಂಗಣಸಂದೀಪ ಕ್ಷೀರಾಬ್ಧಿಮಥನೋದ್ಭವ ।
ವಿಭಾಸಕ ದಿಗಂತಾನಾಂ ಸೋಮರಾಜ ನಮೋಸ್ತುತೇ ॥
ರೋಹಿಣೀ ಸಹಿತ ಚಂದ್ರಮಸೇನಮಃ – ನಮಸ್ಕರೋಮಿ ।
ಗಣೇಶಾಯ ನಮಸ್ತುಭ್ಯಂ ಸರ್ವಸಿದ್ಧಿ ಪ್ರದಾಯಕ ।
ಸಂಕಷ್ಟಂ ಹರಮೇ ದೇವ ಗೃಹಾಣಾರ್ಘ್ಯಂ ನಮೋಸ್ತುತೇ ॥

ಶ್ರೀ ಸಂಕಷ್ಟಹರಗಣೇಶ್ವರಾಯ ನಮಃ ಇದಮರ್ಘ್ಯಂ । ಕೃಷ್ಣಪಕ್ಷೇ ಚತುರ್ಥ್ಯಾಂತು ಸಂಪೂಜಿತ ವಿಧೂದಯೇ ಕ್ಷಿಪ್ರಪ್ರಸಾದಿತೋ ದೇವ ಗೃಹಾಣಾರ್ಘ್ಯಂ ನಮೋಸ್ತುತೇ ಗಣೇಶಾಯನಮಃ ಇದಮರ್ಘ್ಯಂ ॥

ತಿಥೀನಾ ಮುತ್ತಮೇ ದೇವಿ ಗಣೇಶಪ್ರಿಯವಲ್ಲಭೇ
ಸರ್ವಸಂಕಷ್ಟನಾಶಾಯ ಗೃಹಾಣಾರ್ಘ್ಯಂ ನಮೋಸ್ತುತೇ ॥
ಚತುರ್ಥೀದೇವ್ಯೈ ನಮಃ ಇದಮರ್ಘ್ಯಂ ॥

## ಅಥ ವಾಯನ ದಾನಂ

ಬ್ರಾಹ್ಮಣೇ ದೇವಂ ಆವಾಹ್ಯ, ಗಂಧಾದಿಭಿ ರಭ್ಯರ್ಚ್ಯ
ಮೋದಕಾನ್ ಸಫಲಾನ್ ಪಂಚ ದಕ್ಷಿಣಾಭಿಃ ಸಮನ್ವಿತಾನ್ ।
ಗೃಹಾಣತ್ವಂ ದ್ವಿಜಶ್ರೇಷ್ಠ ವ್ರತಸ್ಯ ಪರಿಪೂರ್ತಯೇ ॥
ಗಣೇಶ ರೂಪಿಣೇ ತುಭ್ಯಂ ಸರ್ವಸೌಖ್ಯಾಭಿವೃದ್ಧಯೇ ।
ಆಪದುದ್ಧರಣಾರ್ಥಾಯ ಸ್ವೀಕುರು ದ್ವಿಜಸತ್ತಮ ॥

ಸದಕ್ಷಿಣಾಕಂ ಮೋದಕಸಹಿತೋಪಾಯನದಾನಂ ಶ್ರೀ ಸಂಕಷ್ಟಹರಗಣೇಶ್ವರ ಪ್ರೀತಿಂ ಕಾಮಯಮಾನಃ ತುಭ್ಯಮಹಂ ಸಂಪ್ರದದೇ । ಅನೇನ ದಾನೇನ ಶ್ರೀ ಸಂಕಷ್ಟಹರಗಣೇಶ್ವರಃ ಸುಪ್ರಿತೋಸ್ತು – ಇತ್ಯನುಗೃಹ್ಣಂತು ॥
ಆಚರಿತ ಸಂಕಷ್ಟ ಹರಗಣೇಶ್ವರ ವ್ರತ ಪೂಜಾಸಂಪೂರ್ಣ ಫಲಾವಾಪ್ತಿರಸ್ತು–ಇತಿ ಭವಂತೋನುಗೃಹ್ಣಂತು ॥ ಅನೇನ ದಾನೇನ ಶ್ರೀ ಸಂಕಷ್ಟಹರಃ ಗಣೇಶ್ವರಃ ಪ್ರೀಯತಾಂ ॥

## ಅಥ ಪ್ರಾರ್ಥನಾ

ಬಾಲಾರ್ಕಾರುಣಕಾಂತಿಃ ವಾಮೇ ಬಾಲಾಂ ವಹನ್ನಂಕೇ । ಲಸದಿಂದೀ ವರಹಸ್ತಾಂ ಗೌರಾಂಗೀಂ ರತ್ನಶೋಭಾಢ್ಯಾಂ ॥ ದಕ್ಷೇಂಕುಶವರದಾನಂವಾಮೇಪಾಶಂಚ

ಪಾಯಸಂ ಪಾತ್ರಂ। ನೀಲಾಂಶುಕ ಲಸಮಾನಃ ಪೀಠೇ ಪದ್ಮಾರುಣೇ ತಿಷ್ಠನ್ ॥
ಸಂಕಟಹರಣಃ ಪಾಯಾತ್ ಸಂಕಟಪೂಗಾದ್ಗ ಜಾನನೋ ನಿತ್ಯಂ ॥

ಸಂಸಾರ ಪೀಡಾವ್ಯಥಿತಂ ಹಿಮಾಂ ಸದಾ
ಸಂಕಷ್ಟಭೂತಂ ಸುಮುಖ ಪ್ರಸೀದ।
ತ್ವಂ ತ್ರಾಹಿ ಮಾಂ ನಾಶಯ ಕಷ್ಟಸಂಘಾನ್
ನಮೋ ನಮಃ ಕಷ್ಟವಿನಾಶನಾಯ ॥
ತ್ವಾಮುದ್ದಿಶ್ಯಕೃತಂ ತೇಽದ್ಯ ಯಥಾಶಕ್ತಿ ಪ್ರಪೂಜನಂ।
ಸಂಕಷ್ಟಂಹರ ಮೇ ದೇವ ಉಮಾಸುತ ನಮೋಸ್ತುತೇ ॥
* ವಿಘ್ನರಾಜ ನಮಸ್ತೇಸ್ತು ಉಮಾಪುತ್ರಾಘನಾಶನ।
ಯದುದ್ದಿಶ್ಯ ಕೃತಂ ಮೇದ್ಯ ಯಥಾಶಕ್ತಿ ಪ್ರಪೂಜನಂ।
ತೇನ ತುಷ್ಟೋಮಮಾದ್ಯಾಶು
ಸರ್ವಾನ್ ಕಾಮಾನ್ ಪ್ರಪೂರಯ।
ವಿಘ್ನಾನ್ ನಾಶಯ ಮೇ ಸರ್ವಾನ್
ನಾಶಯೋಪಸ್ಥಿತಾನ್ ಪ್ರಭೋ
ತ್ವತ್ಪ್ರಸಾದೇನ ಕಾರ್ಯಾಣಿ
ಸರ್ವಾಣೀಹ ಕರೋಮ್ಯಹಂ।
ಶತ್ರುವೃದ್ಧಿವಿನಾಶಂಚ
ಮಿತ್ರಾಣಾಮುದಯಂ ಕುರು ॥

ಶ್ರೀ ಸಂಕಷ್ಟಹರಗಣೇಶ್ವರಾಯನಮಃ ಪ್ರಾರ್ಥನಾಂ ಸಮರ್ಪಯಾಮಿ ॥
ಕಥಾಶ್ರವಣಂಕೃತ್ವಾ, ಪುನಃ ಪೂಜಾದಿಕಂ ಕುರ್ಯಾತ್

ಅಬುದ್ಧ ಮತಿರಿಕ್ತಂವಾ ದ್ರವ್ಯಹೀನಂ ಮಯಾಕೃತಂ।
ತತ್ಸರ್ವಂ ಕ್ಷಮ್ಯತಾಂದೇವ ಪ್ರಸೀದ ಗಣನಾಯಕ ॥
ಕಾಯೇನವಾಚಾ....ಇತ್ಯಾದ್ಯುಚ್ಚಾರ್ಯ ಕರ್ಮ ಬ್ರಹ್ಮಾರ್ಪಣಂ ಕೃತ್ವಾ,
ಘಂಟಾಕರ್ಣ ವಿರೂಪಾಕ್ಷ ಕುಂಭೋದರ ಮಹೋದರಾಃ

ವಿಘ್ನೇಶ್ವರ ಪ್ರಸಾದೋಽಯಂ ಸರ್ವೇಗೃಹ್ಣಂತು ವೈಘ್ನಕಾಃ ॥
ಇತಿ ನಿರ್ಮಾಲ್ಯಧಾರಿಣಾಂ ಪ್ರಸಾದಂ ದತ್ವಾ, ದೇವಸ್ಯ ಪ್ರಸಾದಂ ಸ್ವೀಕೃತ್ಯ,
ಪ್ರಸೀದ ಮೇದ್ಯ ವರದ ಸುಪ್ರಸೀದ ದಯಾನಿಧೇ ।
ಪುನಃ ಪುನಃ ಪ್ರಸೀದತ್ವಂ ಪ್ರಸೀದ ವರದೋಭವ
ಇತಿ ಪ್ರಾರ್ಥ್ಯ, ಉದ್ವಾಸನೀಯಾರ್ಘ್ಯಂ ದತ್ವಾ ।
ಯಾಂತು ದೇವಗಣಾಃ ಸರ್ವೇ ಪೂಜಾ ಮಾದಾಯ ಮತ್ಕೃತಾಂ ।
ಇಷ್ಟಕಾಮ್ಯಾರ್ಥ ಸಿದ್ಧ್ಯರ್ಥಂ ಪುನರಾಗಮನಾಯಚ ॥
ಇತ್ಯುಕ್ತ್ವಾ, ಆವಾಹಿತ ಶ್ರೀ ಸಂಕಷ್ಟಹರಗಣೇಶ್ವರಂ
ಪೂಜಿತೋಽಸಿ ಮಯಾ ದೇವ ಸಂಕಷ್ಟಾನ್ ತ್ವಂ ನಿವಾರಯ ।
ನಿವಸತ್ವಂ ಸುರಶ್ರೇಷ್ಠ ಸರ್ವೈ ರಾವರಣೈಃ ಸಹ – ಇತಿ ಪ್ರಾರ್ಥ್ಯ ಯಥಾಸ್ಥಾನ
ಮುದ್ವಾಸಯೇತ್ ॥
ತತಃ ಬ್ರಾಹ್ಮಣಾಯ ಕಲಶ ಪ್ರತಿಮಾದಾನಂ ದತ್ವಾ, ಯಥಾ
ಶಕ್ತಿ ಬ್ರಾಹ್ಮಣಾನ್ ಭೋಜಯಿತ್ವಾ ಸ್ವಯಂ ಚ ದೇವ ಪ್ರಸಾದಂ ಸ್ವೀಕುರ್ಯಾತ್ ॥

ಇತಿ ಶ್ರೀ ಸಂಕಷ್ಟಹರಗಣೇಶ್ವರ ವ್ರತಕಲ್ಪಃ



ಶ್ರೀಃ

ದೇವನಾಥ ಗುರೋಸ್ವಾಮಿನ್ ದೇಶಿಕ ಸ್ವಾತ್ಮನಾಯಕ ।
ತ್ರಾಹಿ ತ್ರಾಹಿ ಕೃಪಾಸಿಂಧೋ ಪುಜಾಂ ಪೂರ್ಣತಮಾಂ ಕುರು
ಜ್ಞಾನತೋಽಜ್ಞಾನತೋವಾಪಿ ಯನ್ಮಯಾಚರಿತಂ ವಿಭೋ ।
ತವ ಕೃತ್ಯಮಿತಿ ಜ್ಞಾತ್ವಾ ಕ್ಷಮಸ್ವ ಪರಮೇಶ್ವರ ॥

ಹೃತ್ಪದ್ಮಕರ್ಣಿಕಾಮಧ್ಯೇ ಶಕ್ತ್ಯಾ ಸಹಗಜಾನನ ।
ಪ್ರವಿಶತ್ವಂ ಗಣೇಶಾನ ಸರ್ವೈ ರಾವರಣೈಃ ಸಹ ॥







## ಅಥ ಕಥಾ

**ಋಷಯ ಊಚುಃ** — ದಾರಿದ್ರ್ಯರೋಗ ಶೋಕಾದ್ಯೈ ರ್ನಾನಾಸಂಕಟ ಸಂಯುತೈಃ । ಕಿಂ ಕರ್ತವ್ಯಂ ಚ ತೈ ರ್ದೇವ ಯೋಗಕ್ಷೇಮಾರ್ಥಸಿದ್ಧಯೇ ॥

**ಶ್ರೀ ಸ್ಕಂದ ಉವಾಚ** – ವ್ರತರಾಜಂ ಮಹಾಪುಣ್ಯಂ ನರಾಣಾಂ ಸಿದ್ಧಿದಾಯಕಂ । ಆರ್ತಾನಾಂತು ವಿಶೇಷೇಣ ಪುತ್ರ ಸೌಭಾಗ್ಯದಾಯಕಂ । ಕೃಷ್ಣೇನ ಕಥಿತಂ ಪೂರ್ವಂ ಧರ್ಮರಾಜಾಯ ಧೀಮತೇ । ತಸ್ಯಕಷ್ಟ ವಿಮೋಕಾರ್ಥಂ ತಚ್ಛೃಣುಧ್ವಂ ದ್ವಿಜೋತ್ತಮಾಃ ॥ **ಯುಧಿಷ್ಠಿರ ಉವಾಚ** – ಕೇನೋಪಾಯೇನ ದೇವೇಶ ಸರ್ವಸಂಕಷ್ಟನಾಶನಂ । ಮುಕ್ತೋಭವಾಮಿ ತಂಬ್ರೂಹಿ ಸರ್ವಜ್ಞೋಸಿ ಗದಾಧರ ॥ ಕೃತಪ್ರಶ್ನೋ ಹೃಷೀಕೇಶಃ ಪ್ರೋಕ್ತವಾನ್ ಸಯುಧಿಷ್ಠಿರಂ । ಪ್ರಯತ್ನಂ ಪ್ರಾಂಜಲಿಂ ನಿತ್ಯಂ ನಮಸ್ಕೃತ್ಯ ಪುನಃ ಪುನಃ ॥ **ಶ್ರೀ ಕೃಷ್ಣ ಉವಾಚ** – ತವವಕ್ಷ್ಯಾಮಿ ಭೋರಾಜನ್ ವ್ರತಂ ಸರ್ವಾರ್ಥದಾಯಕಂ । ಗಾಣಪತ್ಯಂ ಮಹಾಪುಣ್ಯಂ ವ್ರತಾನಾಮುತ್ತಮಂ ವ್ರತಂ ॥ ಪುರಾ ಕೃತಯುಗೇ ಪುಣ್ಯೇ ಹಿಮಾಚಲಸುತಾ ಶುಭಾ ಪಾರ್ವತೀ ರೂಪಸಂಪನ್ನಂ ಮಹೇಶಂ ಪತಿಮಿಚ್ಛತಿ । ತಪಸ್ತಪ್ತ್ವಾ ಮಹಾಘೋರಂ ದುಸ್ತರಂ ರೋಮಹರ್ಷಣಂ ॥ ನಪ್ರಾಪ್ತಾತು ಫಲಂಕಿಂಚಿದ್ಗಣನಾಥಂ ಶಿವ ಪ್ರಿಯಾ । ಸ್ಮೃತ್ವಾಚಾರಾಧಯಾಮಾಸ ಪ್ರಸನ್ನೋಭೂದ್ಗಣೇಶ್ವರಃ ॥

---

## ಅನುವಾದ

ಒಮ್ಮೆ ಸರ್ವಲೋಕಹಿತವನ್ನು ಬಯಸುವ ಋಷಿಗಳೆಲ್ಲರು ಭಗವಾನ್ ಶ್ರೀ ಸ್ಕಂದರ ಬಳಿಗೆ ಹೋಗಿ, ಎಲೈ ಷಣ್ಮುಖನೇ, ಈ ಭೂಲೋಕ ವಾಸಿಗಳಾದ ಸಮಸ್ತಜನರು, ತಂತಮ್ಮ ದಾರಿದ್ರ್ಯ ರೋಗ ಸಂಕಷ್ಟಗಳಿಂದ ಪರಿತಪಿಸುತ್ತಿರುವುದನ್ನು ಪರಿಹರಿಸುವ ಒಂದು ಉತ್ತಮೋತ್ತಮವಾದ ವ್ರತವನ್ನು ಅನುಗ್ರಹಿಸಬೇಕು ಎಂದು ಪ್ರಾರ್ಥಿಸಲು ಶ್ರೀ ಶರವಣ ಭವರು ಹೀಗೆಂದರು-ಎಲೈ ಋಷಿಗಳಿರಾ ಸಾವಧಾನಚಿತ್ತರಾಗಿ ಆಲಿಸಿರಿ. ಮನುಷ್ಯರಿಗೆ ಅದರಲ್ಲೂ ಆರ್ತರಿಗೆ ಸೌಭಾಗ್ಯ ಮತ್ತು ಸಿದ್ಧಿದಾಯಕವಾದ ಒಂದು ಮಹಾಪುಣ್ಯಕರವಾದ ವ್ರತಶ್ರೇಷ್ಠವನ್ನು ನಿಮಗೆ ತಿಳಿಸುವೆನು. ಇದನ್ನು ಆದಿಯಲ್ಲಿ ಶ್ರೀಕೃಷ್ಣನು ಧರ್ಮರಾಯನಿಗೆ ಹೇಳಿದ್ದನು. ಅದರಂತೆ

**ಶ್ರೀ ಗಣೇಶ ಉವಾಚ** – ದಾಸ್ಯಾಮಿ ಶೋಭನೇ ತುಭ್ಯಂ ಪ್ರಾರ್ಥಿತಂ ನಾತ್ರ ಸಂಶಯಃ। ವ್ರತಸ್ಯಾಚರಣಂ ಪುಣ್ಯಂ ಸಂಕಷ್ಟಸ್ಯ ಸುದುಷ್ಕರಂ॥ ಯೇನತೇ ಜಾಯತೇಸಿದ್ಧಿಃ ಕಾರ್ಯಾಣ್ಯಪಿ ಚ ಪಾರ್ವತಿ॥ ಶ್ರಾವಣೇ ಕೃಷ್ಣ ಪಕ್ಷೇತು ಚತುರ್ಥ್ಯಾಂತು ವಿಧೂದಯೇ। ತಸ್ಮಿನ್ನೇವ ವ್ರತಂ ಕಾರ್ಯಂ ಸಂಕಷ್ಟಸ್ಯ ಸುರೇಶ್ವರಿ॥ ಪ್ರಾತಃ ಶುಚಿರ್ಭವೇತ್ ಸ್ನಾತ್ವಾದಂತಧಾವನ ಪೂರ್ವಕಂ। ನಿರಾಹಾರೋದ್ಯ ದೇವೇಶ ಯಾವಚ್ಚಂದ್ರೋದಯೋಭವೇತ್ । ಭೋಕ್ಷ್ಯಾಮಿ ಪೂಜಯಿತ್ವಾ ಹಂ ಗಣೇಶಂ ಸುಖದಂ ಶಿವಂ। ಇತಿ ಸಂಕಲ್ಪ್ಯ ಚಾದೌತು ಸ್ನಾಯಾಚ್ಛುಕ್ಲತಿಲೈಃ ಶುಭೈಃ। ಆಹ್ನಿಕಂತು ವಿಧಾಯೈವ ಪೂಜಾಂಮೇ ಕುರು ಸುವ್ರತೇ। ಯಥಾಶಕ್ತ್ಯಾತು ಸೌಭಾಗ್ಯಂ ಪ್ರತಿಮಾಂ ತು ವಿಧಾಯಚ। ಪದ್ಮಮಷ್ಟದಳಂ ಕೃತ್ವಾಗಂಧಾದ್ಯೈರಪಿ ಪೂಜಯೇತ್। ಷೋಡ ಶೈರುಪಚಾರೈಶ್ಚ ಭಕ್ತಿಭಾವ ಸಮನ್ವಿತಃ। ಲಂಬೋದರಂ ಚತುರ್ಬಾಹುಂ ರಕ್ತವರ್ಣಂ ತ್ರಿನೇತ್ರಕಂ। ನಾನಾವರ್ಣ ಸಮಾಯುಕ್ತಂ ಪ್ರಸನ್ನಾಸ್ಯಂ ವಿಚಿಂತಯೇತ್। ಮೋದಕಾನ್ ಕಾರಯೇದ್ದೇವಿ ತಿಲಜಾನ್ ದಶಸಂಖ್ಯಯಾ। ದೇವಾಗ್ರೇಸ್ಥಾಪಯೇತ್ಪಂಚ ಪಂಚ ವಿಪ್ರಾಯ ದಾಪಯೇತ್॥ ಪೂಜಯಿತ್ವಾದ್ಭುತಂ ವಿಪ್ರಂಭಕ್ತಿ ಪ್ರೇಮಾಭಿಪೂರ್ವಕಂ। ದಕ್ಷಿಣಾಂತು ಯಥಾಶಕ್ತಿದತ್ವಾ ಪಂಚೈವ ಮೋದಕಾನ್। ಭಕ್ಷಯೇನ್ನಿಶಿ ಚಂದ್ರಸ್ಯ ಅರ್ಘ್ಯಂದತ್ವಾಶುಚಿಸ್ಮಿತೇ।

---

ಆಚರಿಸಲು ಧರ್ಮರಾಜನು ಸಕಲ ಸಂಕಷ್ಟಗಳಿಂದಲೂ ವಿಮುಕ್ತನಾಗಿದ್ದನು. ಅದನ್ನೇ ನಿಮಗೆ ವಿವರಿಸುವೆನು — ಒಂದು ದಿನ ಧರ್ಮರಾಯನು ಶ್ರೀ ಕೃಷ್ಣನನ್ನು ಕುರಿತು ಎಲೈ ಗದಾಧರನೇ, ನಮ್ಮ ಸಂಕಷ್ಟವು ಪರಿಹಾರ ವಾಗುವ ಬಗೆಯನ್ನು ತಿಳಿಸಬೇಕೆಂದು ಪ್ರಾಂಜಲಿಯಾಗಿ ಪ್ರಾರ್ಥಿಸಿಕೊಳ್ಳಲು ಶ್ರೀ ಕೃಷ್ಣನು ಎಲೈ ಧರ್ಮರಾಯನೇ, ಮನುಷ್ಯನ ಸಕಲ ಸಂಕಷ್ಟಗಳನ್ನೂ ಪರಿಹರಿಸುವ ಶ್ರೀ ಸಂಕಷ್ಟಹರಗಣೇಶ ವ್ರತವೆಂಬ ಒಂದು ಉತ್ತಮೋತ್ತಮವಾದ ವ್ರತರತ್ನವಿದೆ. ಅದನ್ನು ನಿನಗೆ ವಿವರಿಸುವೆನು. ಹಿಂದೆ ಕೃತಯುಗದಲ್ಲಿ ಹಿಮಾಚಲಸುತೆಯಾದ ಗೌರಿಯು ಈಶ್ವರನನ್ನು ಲಗ್ನವಾಗಬೇಕೆಂದು ಘೋರ ತಪಸ್ಸನ್ನು ಆಚರಿಸಿದಳು. ಆಗ ಗಣನಾಥನನ್ನು ಸ್ಮರಿಸಲಾಗಿ ಅತನು ಪ್ರತ್ಯಕ್ಷನಾಗಿ ಹೀಗೆಂದನು.

ಎಲೈ ಶೋಭನೆಯೇ, ನೀನು ಸಂಕಷ್ಟಹರಗಣೇಶ್ವರ ವ್ರತವನ್ನು ಮಾಡುವುದರಿಂದ ನಿನ್ನ ಕಾರ್ಯ ಸಿದ್ಧಿಯಾಗುವುದರಲ್ಲಿ ಸಂಶೀತಿಲೇಶವೂ ಇಲ್ಲ. ಆವ್ರತವನ್ನು ಶ್ರಾವಣ

ಪ್ರತಿಮಾಂ ಗುರವೇ ದದ್ಯಾತ್ ಯಥಾಶಕ್ತಿ ತು ದಕ್ಷಿಣಾಂ। ಗಚ್ಛ ಗಚ್ಛ ಸುರಶ್ರೇಷ್ಠ ಸ್ವಸ್ಥಾನಂ ಚ ವಿನಾಯಕ। ವ್ರತೇನಾನೇನ ಸಂತುಷ್ಟೋ ಯಥೋಕ್ತ ಫಲದೋಭವ। ಏವಂ ವ್ರತಂ ಪ್ರಕುರ್ವೀತ ಚತುರ್ಥ್ಯಾಂ ಶ್ರಾವಣೇಽಸಿತೇ॥ ಏವಂ ಕೃತೇ ಯಥಾ ಭಕ್ತಿ ಪ್ರಸನ್ನೋಽಹಂ ನ ಸಂಶಯಃ। ದದಾಮಿ ವಾಂಛಿತಾನ್ ಕಾಮಾನ್ ತದ್ವ್ರತಂ ಕುರುಸುವ್ರತೇ॥ ಏವಂತೇ ಕಥಿತಂ ಪೂರ್ವಂ ಗಣೇಶೇನ ಸ್ವಯಂನ್ನೃಪ। ಪಾರ್ವತ್ಯಾರಾಧಿತೇ ನೈವ ವ್ರತ ಮೇತತ್ಪ್ರಕೀರ್ತಿತಂ। ವ್ರತೇನಾನೇನ ಸಾಪ್ರಾಪ ಮಹಾದೇವಂ ಪತಿಂಪ್ರಭುಂ। ತತ್ಕುರುಷ್ವ ವಿಧಾನೇನ ವ್ರತಂ ಸಂಕಷ್ಟನಾಶನಂ। ಚತುರ್ಥೀ ಸಂಕಟೋನಾಮ ವ್ರತ ಮೇತತ್ತಥಾಚರೇತ್। ಏವಂ ಕೃಷ್ಣಮುಖಾತ್ಪ್ರಾಪ್ತಂ ವ್ರತಂ ಸಂಕಷ್ಟನಾಶನಂ। ಕೃತಂ ಧರ್ಮೇಣ ವಿಪ್ರೇಂದ್ರಾ ರಾಜ್ಯ ಕಾಮೇನ ಸರ್ವದಾ॥ ತಸ್ಮಾತ್ ಸರ್ವ ಪ್ರಯತ್ನೇನ ವ್ರತಂ ಕಾರ್ಯಂ ವಿಚಕ್ಷಣೈಃ। ಯೇನ ಧರ್ಮಾರ್ಥ ಕಾಮಾಶ್ಚ ಮೋಕ್ಷಶ್ಚಾಪಿಭವೇದಿ ಹ॥ ಯದಾಯದಾತು ಸಂಯುಕ್ತೋ ನರೋವ್ಯೈ ಸಂಕಟೇಷು ಚ। ತದಾ ತದಾತು ಕರ್ತವ್ಯಂ ವ್ರತಂ ಸರ್ವಾರ್ಥಸಾಧಕಂ। ವಿದ್ಯಾರ್ಥೀ ಲಭತೇ ವಿದ್ಯಾಂ, ಧನಾರ್ಥೀ ಲಭತೇ ಧನಂ। ಪುತ್ರಾರ್ಥೀ ಲಭತೇ ಪುತ್ರಾನ್ ಮೋಕ್ಷಾರ್ಥೀ ಮೋಕ್ಷಯಾಪ್ನುಯಾತ್॥ ಇದಂ ಯಃ ಶ್ರಾವಯೇದ್ಭಕ್ತ್ಯಾಯಃ ಪಠೇತ್ಸತತಂ ದ್ವಿಜಃ। ಇಹ ಲೋಕೇ ಸುಖಂ ಪ್ರಾಪ್ಯ ಚಾಂತೇ ಮುಕ್ತಿಮವಾಪ್ನುಯಾತ್॥

ಇತಿ ಶ್ರೀಸ್ಕಾಂದ ಪುರಾಣೇ ಸ್ಕಂದರ್ಷಿ ಸಂವಾದೇ
ಸಂಕಷ್ಟ ಚತುರ್ಥೀ ವ್ರತಕಥಾ॥

---

ಮಾಸ, ಕೃಷ್ಣಪಕ್ಷ, ಚತುರ್ಥಿಯಂದು ಆಚರಿಸಿ, ಚಂದ್ರೋದಯಾ ನಂತರ ಅರ್ಘ್ಯ ಪ್ರದಾನ ಮಾಡಬೇಕು. ವ್ರತವನ್ನು ಮಾಡಬಯಸುವವನು, ಆ ದಿನ ಅರುಣೋದಯ ಕಾಲದಲ್ಲಿಯೇ ಎದ್ದು, ಶೌಚಕರ್ಮವನ್ನು ಮುಗಿಸಿಕೊಂಡು, ನದಿತೀರಕ್ಕೆ ಹೋಗಿ, ಅಲ್ಲಿ ಬಿಳೀ ಎಳ್ಳಿನ ಕಾಳನ್ನು ಶುದ್ಧವಾಗಿರುವಂತೆ ಹೊಟ್ಟು ತೆಗೆದು, ಮೈಗೆ ಉಜ್ಜಿಕೊಂಡು ಸ್ನಾನಮಾಡಿ, ನಿತ್ಯ ಅನುಷ್ಠಾನವನ್ನೆಲ್ಲಾ ಮುಗಿಸಿ, "ಸಾಯಂಕಾಲದವರೆಗೂ ಉಪವಾಸವಿದ್ದು ವಿನಾಯಕ ವ್ರತವನ್ನು ಮಾಡುತ್ತೇನೆ" ಎಂದು ಸಂಕಲ್ಪಿಸಬೇಕು. ಪ್ರದೋಷ ಕಾಲದಲ್ಲಿಯೇ ಪುನಃ ಸ್ನಾನಗೈದು, ಶುಚಿಯಾದ ಸ್ಥಳದಲ್ಲಿ ಅಷ್ಟದಳ ಪದ್ಮವನ್ನು ಬರೆದು ಅದನ್ನು ಗಂಧಾದಿ ಗಳಿಂದ ಅಲಂಕರಿಸಿ, ಅಲ್ಲಿ ತ್ರಿನೇತ್ರನೂ,

ಚತುರ್ಭುಜನೂ, ರಕ್ತವರ್ಣನೂ, ಲಂಭೋದರನೂ, ನಾನಾವರ್ಣ ಸಮಾಯುಕ್ತನೂ, ಪ್ರಸನ್ನಾಸ್ಯನೂ ಆದ ಸಂಕಷ್ಟ ಹರಗಣೇಶ್ವರನನ್ನು ಸ್ಥಾಪಿಸಿ, ಪ್ರಾಣಪ್ರತಿಷ್ಠೆಗೈದು, ಕಲ್ಪೋಕ್ತ ವಿಧಾನದಿಂದ ಪೂಜಿಸಬೇಕು ಎಳ್ಳಿನ ಕಡಬು (ಮೋದಕ) ಮಾಡಿ, ಐದನ್ನು ದೇವರಿಗೆ ನಿವೇದಿಸಬೇಕು. ಐದನ್ನು ಬ್ರಾಹ್ಮಣರಿಗೆ ದಾನಮಾಡಬೇಕು. ದೇವರಿಗೆ ನಿವೇದಿಸಿದ ಐದನ್ನು ಮಾತ್ರ ತಾನು ತಿಂದು ಆ ರಾತ್ರಿ ಜಾಗರಣೆ ಮಾಡಬೇಕು, ಚಂದ್ರೋದಯವಾಗಲು ಚಂದ್ರನಿಗೆ ಕಲ್ಪೋಕ್ತ ಮಂತ್ರ ದಿಂದ ಅರ್ಘ್ಯಪ್ರದಾನ ಮಾಡಬೇಕು.

ಸವಸ್ತ್ರಪ್ರತಿಮ ಕಲಶವನ್ನು ದಕ್ಷಿಣಾ ಸಹಿತವಾಗಿ ಆಚಾರ್ಯರಿಗಿತ್ತು ಶ್ರೀ ಸಂಕಷ್ಟಹರಗಣೇಶನನ್ನು ವಿಸರ್ಜಿಸಬೇಕು ಈ ರೀತಿಯಾಗಿ ಶ್ರಾವಣ ಕೃಷ್ಣಚತುರ್ಥಿ ಯಲ್ಲಿ ಈ ವ್ರತವನ್ನು ಮಾಡಿದರೆ ನಾನು ಪ್ರಸನ್ನನಾಗಿ ಅವರ ವಾಂಛಿತಾರ್ಥಗಳನ್ನು ಕರುಣಿಸುವೆನು-ಎಂದು ಆರಾಧಿಸಲ್ಪಟ್ಟ ಪಾರ್ವತೀದೇವಿಗೇ ಅವಳ ಸಂಕಷ್ಟ ಪರಿಹಾರಕ್ಕಾಗಿ ಗಣೇಶನು ಈ ವ್ರತವನ್ನು ಮೊದಲು ಉಪದೇಶಿಸಿದನು. ಅವಳೂ ಯಥೋಕ್ತವ್ರತಾಚರಣೆ ಮಾಡಿ ಮಹಾದೇವನನ್ನು ಮದುವೆಯಾದಳು. ಆದ್ದರಿಂದ ಎಲೈ ಧರ್ಮಜನೇ, ನೀನೂ ಸಂಕಷ್ಟಹರಗಣೇಶ್ವರ ವ್ರತವನ್ನು ಭಕ್ತಿಯಿಂದ ಆಚರಿಸಿ ಕೃತಾರ್ಥನಾಗು. ಇದಕ್ಕೆ ಸಂಕಷ್ಟಹರಚತುರ್ಥಿವ್ರತವೆಂಬ ನಾಮಾಂತರವಿದೆ. ಇದನ್ನು ಭಕ್ತಿಯಿಂದ ಆಚರಿಸುವಲ್ಲಿ ಜನರು ಈ ಲೋಕದಲ್ಲಿಯೇ ಧರ್ಮಾರ್ಥಕಾಮ ಮೋಕ್ಷಗಳೆಂಬ ಪುರುಷಾರ್ಥ ಚತುಷ್ಟಯವನ್ನೂ ನಿಸ್ಸಂಶಯವಾಗಿಪಡೆಯುವರು. ಶ್ರಾವಣ ಕೃಷ್ಣ ಚತುರ್ಥಿಯಲ್ಲಿ ಒಂದು ವೇಳೆ ಮಾಡಲಾಗದಿದ್ದಲ್ಲಿ ಬೇರೆ ಯಾವುದಾದರೂ ಕೃಷ್ಣ ಚತುರ್ಥಿಯಲ್ಲಿಯಾದರೂ ಭಕ್ತಿಯಿಂದ ವ್ರತಾಚರಣೆ ಮಾಡುವಲ್ಲಿ ಅವರು, ವ್ರತ ಮಹಿಮೆಯಿಂದ ಸರ್ವಾರ್ಥಸಾಧನವನ್ನು ಪಡೆಯುವರು. ವಿದ್ಯಾರ್ಥಿಗೆ ವಿದ್ಯೆಯೂ, ಧನಾರ್ಥಿಗೆ ಧನವೂ. ಪುತ್ರಾರ್ಥಿಗೆ ಸಂತಾನವೂ ಹೆಚ್ಚೇಕೆ ಮೋಕ್ಷಾರ್ಥಿಗೆ ಮೋಕ್ಷವೂ ಈ ವ್ರತಾಚರಣೆಯಿಂದ ದೊರಕುವುದು. ಈ ವ್ರತವನ್ನು ಮಾಡಲಾಗದಿದ್ದರೂ, ಇದರ ಮಹತ್ವವನ್ನು ಕೇಳಿ ತಿಳಿದವರು ಮತ್ತು ಇದನ್ನು ಜನರಿಗೆ ಓದಿ ತಿಳಿಸುವವರೂ ಸಹ ಈ ಲೋಕದ ಸುಖವನ್ನೆಲ್ಲ ಸಂಪೂರ್ಣ ವಾಗಿ ಅನುಭವಿಸಿ ಪರಲೋಕದಲ್ಲಿ ಗಾಣಸತ್ಯ ಸ್ಥಾನವನ್ನು ಪಡೆಯುವರು.

ಪ್ರಥಮೋಧ್ಯಾಯವು ಮುಗಿದುದು



## ಅಥ ದ್ವಿತೀಯೋಧ್ಯಾಯಃ

ಶ್ರೀಸ್ಕಂದಉವಾಚ - ಪುನರಗ್ರೇ ಪ್ರವಕ್ಷ್ಯಾಮಿ ಶೃಣುಧ್ವಂ ಮುನಿ ಸತ್ತಮಾಃ ॥ ರಾವಣೇನ ಕೃತಂ ಪೂರ್ವಂ ಬಲವರ್ಧನ ಸಂಕಟೇ । ಸೀತಾ ವಿಯೋಗಕಾಲೇತು ಕೃತಂ ರಾಮೇಣ ವೀರ್ಯವತ್। ಭರ್ತಾರಂ ಪ್ರಾಪಸಾ ಸೀತಾ ವ್ರತಸ್ಯಾಸ್ಯ ಪ್ರಭಾವತಃ ॥ ಪುರಾ ಮಯಿ ಹ್ಯದೃಶ್ಯೇತು ಪಾರ್ವತ್ಯಾ ವೈ ಕೃತಂ ಕಿಲ । ಚತುರ್ಷ್ವಪಿ ಚ ಮಾಸೇಷು ಹರವಾಕ್ಯೇನಪಾರ್ಥಿವ । ಪಂಚಮೇ ಮಾಸಿ ದೃಷ್ಟೋಽಹಂ ಮುನೀಂದ್ರಾ ವೈ ಹ್ಯಪರ್ಣಯಾ ॥ ಸಮುದ್ರಪಾನವೇಲಾ ಯಾಂ ಹ್ಯಗಸ್ತ್ಯೇನ ಪುರಾ ಕೃತಂ ॥ ತ್ರಿಷುಮಾಸೇಷು ವಿಘ್ನೇಶ ಪ್ರಸಾದಾತ್ ಪ್ರೀತಿಮಾನ್ ದ್ವಿಜಾಃ । ಷಣ್ಮಾಸಾವಧಿ ಯೋಗೀಂದ್ರಾ ದಮಯಂತ್ಯಾ ಕೃತಂತ್ವಿದಂ ॥ ನಳಮನ್ವೇಷಯಂತ್ಯಾತು, ತತೋದೃಷ್ಟೋನಳೋಽಭವತ್ ॥ ನೀತೇಽನಿರುದ್ಧೇಬಾಣಸ್ಯ ನಗರಂ ವೇದ ವಿತ್ತಮಾಃ । ಸಂಕಷ್ಟಹರಣಂ ಹ್ಯೇತತ್ ಕೃಷ್ಣೇನಾಚರಿತಂ ದ್ವಿಜಾಃ । ವ್ರತಸ್ಯಾಸ್ಯ ಪ್ರಭಾವೇಣ ಪುತ್ರಲಾಭೋಽಭವದ್ಧ್ರುವಂ ॥ ಅನ್ಯೈರ್ದೇವಾಸುರೈಃ ಪೂರ್ವಂ ಕೃತಂವಿಘ್ನೇಶ ತುಷ್ಟಯೇ । ಋಷಿಭಿರ್ದಾನವೈಶ್ಚೈವತಥಾ ರಾಕ್ಷಸ ಕಿನ್ನರೈಃ ॥ ಆ ಪದ್ಯಪಿ ಚ ಸಂಕಷ್ಟೇ ಪ್ರಕುರ್ಯಾತ್ ರೋಗಶಾಂತಯೇ । ಅನೇನ ಸದೃಶಂನಾಸ್ತಿ ಸರ್ವಸಿದ್ಧಿಕರಂವ್ರತಂ ॥

ಕಾರ್ಯ ಗೌರವಮಾಲಕ್ಷ್ಯ ಕುರ್ಯಾನ್ನಾಮ್ನಾನ್ ಬಹೂನ್ಯಪಿ । ಬಹುನಾಽತ್ರ ಕಿಮುಕ್ತೇನ ನಾಸ್ತ್ಯನ್ಯತ್ ಕಾರ್ಯಸಿದ್ಧಯೇ । ನೋಪದೇ ಶ್ಯಂತ್ವಭಕ್ತಾಯ ನಾಸ್ತಿಕಾಯ ಕದಾಚನ । ದೇಯಂ ಪುತ್ರಾಯ ಶಿಷ್ಯಾಯ ಶ್ರದ್ಧಾಯುಕ್ತಾಯ ಸಾಧವೇ ॥ ಯದಾ

## ಅನುವಾದ

**ಎರಡನೆ ಅಧ್ಯಾಯ**—ಎಲ್ಲೈ ಮುನಿಗಳಿರಾ, ಶ್ರೀ ಸಂಕಷ್ಟಹರಗಣಪತಿ ವ್ರತದ ಮಾಹಾತ್ಮ್ಯೆಯನ್ನು ಇನ್ನೂ ಕೇಳಿರಿ:- ಹಿಂದೆ ರಾವಣೇಶ್ವರನು ಅಖಿಲ ಬಲ ಸಂಪ್ರಾಪ್ತಿಗಾಗಿ ಈ ವ್ರತವನ್ನು ಮಾಡಿದನು. ಸೀತಾವಿಯೋಗ ಕಾಲದಲ್ಲಿ ಶ್ರೀರಾಮ ಚಂದ್ರನಿಂದಲೂ ಈ ವ್ರತವು ಆಚರಿಸಲ್ಪಟ್ಟಿತು. ಹಿಂದೆ ನಾನೂ ಕಾರಣಾಂತರದಿಂದ ಅದೃಶ್ಯನಾಗಿದ್ದಾಗ ಪರಮೇಶ್ವರನ ಉಪದೇಶದಂತೆ ಪುತ್ರವಿಯೋಗದಿಂದ ಚಿಂತಿತಳಾದ ಪಾರ್ವತಿಯೂ ನಾಲ್ಕು ತಿಂಗಳಕಾಲ ಈ ವ್ರತವನ್ನು ಆಚರಿಸಿ ಐದನೆಯ ತಿಂಗಳಲ್ಲಿ ನನ್ನನ್ನು ಪುನಃ ಪಡೆದಳು. ಅಗಸ್ತ್ಯ ಮಹರ್ಷಿಗಳೂ ತಾವು ಸಮುದ್ರಪಾನ

ಯದಾ ಪಶ್ಯತಿ ಕಾರ್ಯಮುದ್ಯತಂ ನಾರೀ ನರೋವಾ ವಿದಧಾತಿ ತದ್ವ್ರತಂ।
ಸಂಪ್ರೇತ್ಯ ಕಾರ್ಯಾಣಿ ಸಮೀ ಹಿತಾನಿ ಕಿಂ ದುರ್ಲಭಂ ವಿಘ್ನಹರೇಪ್ರಸನ್ನೇ ॥

ಇತೀ ಶ್ರೀ ಸ್ಕಂದ ಪುರಾಣೇ
ಸ್ಕಂದರ್ಷಿ ಸಂವಾದೇ ಸಂಕಷ್ಟಹರಗಣೇಶವ್ರತ
ಕಥಾಯಾಂ ದ್ವಿತೀಯೋಧ್ಯಾಯಃ

---

ಮಾಡುವ ಮೊದಲು ಈ ವ್ರತಾಚರಣೆಯನ್ನು ಮಾಡಿ ಅದರಿಂದ ಪ್ರಭಾವಿತರಾಗಿ ಕಾರ್ಯಸಾಧನೆ ಮಾಡಿದರು. ಎಲೈ ಯೋಗೀಂದ್ರರೇ, ಹಿಂದೆ ಆರುತಿಂಗಳ ಕಾಲ ಈ ವ್ರತಾಚರಣೆಯನ್ನು ಮಾಡಿ ಅದರಿಂದ ಪ್ರಭಾವಿತಳಾಗಿ ಕಾರ್ಯಸಾಧನೆ ಮಾಡಿದ ದಮಯಂತಿಯು, ಗಣೇಶಾನುಗ್ರಹದಿಂದ ಪುನಃ ನಳನನ್ನು ಪಡೆದಳು. ಅದರಂತೆ, ಅನಿರುದ್ಧನು ಬಾಣಾಸುರನ ನಗರಕ್ಕೆ ಶತ್ರುಗಳಿಂದ ಒಯ್ಯಲ್ಪಡಲು, ಎಲೈ ವೇದವಿತ್ತಮರೇ, ಶ್ರೀ ಕೃಷ್ಣನಿಂದಲೇ ಈ ವ್ರತಾಚರಣೆಯು ಮಾಡಲ್ಪಟ್ಟಿತು. ಅದರಿಂದ ಅವನಿಗೆ ಅನಿರುದ್ಧನನ್ನು ಪುನಃ ಪಡೆಯಲು ಸಾಧ್ಯವಾಯಿತು. ಇಷ್ಟೇ ಅಲ್ಲದೆ, ಈ ಸಂಕಷ್ಟನಾಶಕ ವ್ರತವನ್ನು ದೇವತೆಗಳೂ, ಅಸುರರೂ, ಋಷಿಗಳೂ, ಮನುಷ್ಯರೂ ಆಚರಿಸಿ ತಂತಮ್ಮ ಇಷ್ಟಸಿದ್ಧಿ ಪಡೆದಿದ್ದರು.

ಆದುದರಿಂದ, ಆಪತ್ಕಾಲದಲ್ಲಿಯೂ, ರೋಗಾದಿಗಳಿಂದ ಪೀಡಿತರಾಗಿರುವಾಗಲೂ, ಸುಖಸೌಖ್ಯಗಳನ್ನು ಪಡೆಯಲು, ಸರ್ವೇಷ್ಟಾರ್ಥಸಿದ್ಧಿಯುಂಟು ಮಾಡುವ ಈ ವ್ರತವನ್ನು ಆಚರಿಸಬೇಕು. ಇದಕ್ಕೆ ಸಮಾನವಾದ ಬೇರೊಂದು ವ್ರತವಿಲ್ಲ. ಆಯಾ ಕಾಮ್ಯಕರ್ಮಗಳ ತಾರತಮ್ಯಕ್ಕೆ ಅನುಸಾರವಾಗಿ ಸಾಧ್ಯವಾದಷ್ಟು ಅಧಿಕ ಮಾಸಗಳ ಕಾಲ ಈ ವ್ರತವನ್ನು ಭಕ್ತಿಯಿಂದ ಅನುಷ್ಠಿಸಬೇಕು. ಹೆಚ್ಚಿಗೆ ತಿಳಿಸುವುದರಿಂದ ಫಲವೇನೂ ಕಾಣದು. ಒಟ್ಟಿನಲ್ಲಿ ಈ ಸಂಕಷ್ಟಹರಗಣೇಶ್ವರ ವ್ರತಕ್ಕೆ ಸಮವಾದ ಬೇರೊಂದು ವ್ರತವಿಲ್ಲ. ಆದ್ದರಿಂದ ಉತ್ತಮೋತ್ತಮವಾದ ಈ ವ್ರತವನ್ನು ಅನರ್ಹರಿಗೆಲ್ಲಾ ಉಪದೇಶಿಸದೆ ಗೋಪ್ಯವಾಗಿಟ್ಟುಕೊಂಡು, ಸಿದ್ಧ ಜನರಿಗೆ ಮಾತ್ರ ಉಪದೇಶಿಸಬೇಕು. ಶ್ರೀ ಸಂಕಷ್ಟಹರಗಣೇಶ್ವರನು ಸ್ವತಃ ತಾನು ಪ್ರಸನ್ನನಾದಾಗ ಲೋಕದ ಜನರಿಗೆ ಬೇರೆ ನಶ್ವರವಾದ ಯಾವ ಉಪಭೋಗ್ಯ ವಸ್ತುಗಳಲ್ಲಿಯೂ ಆಸಕ್ತಿ ಉಂಟಾಗದು. ಸಂತುಷ್ಟನಾದ ಆ ಸಂಕಷ್ಟಹರಗಣಪತಿಯು ಭಕ್ತರ ಸರ್ವಾರ್ಥಸಿದ್ಧಿಯನ್ನು ಉಂಟುಮಾಡುವುದರಲ್ಲಿ ಸಂಶಯವಿಲ್ಲವು.

ಎರಡನೆ ಅಧ್ಯಾಯವು ಮುಗಿದುದು.

ಶ್ರೀ ಸಂಕಷ್ಟಹರಗಣೇಶ್ವರಾರ್ಪಣಮಸ್ತು



# ಶ್ರೀ ಮಹಾಗಣಪತಿ



ಭಕ್ತಾನುಚರ

**ಆಗಮಿಕ, ಕೆ.. ಗಣಪತಿ ಸೋಮಯಾಜೀ**

(ಶಿರೋಮಣಿ – ವಿದ್ವಾನ್ – ವಿಶಾರದ – ರತ್ನ)

ಪ್ರಾಪ್ತಿಸ್ಥಾನಂ

**ಶ್ರೀ ಗಣೇಶ ಕೃಪಾ, 1237, 25 A ಮುಖ್ಯರಸ್ತೆ, 9ನೇ ಬ್ಲಾಕ್,**

**ಜಯನಗರ, ಬೆಂಗಳೂರು – 69**



# ಶ್ರೀ ಮಹಾಗಣಪತಿ

## ರಾಷ್ಟ್ರೀಯ ದೇವತೆ

ಗಣಪತಿಯು ಜ್ಞಾನದೇವತೆಯಾದುದರಿಂದ ರಾಷ್ಟ್ರದ ಅಜ್ಞಾನವನ್ನು ತೊಲಗಿಸಬಲ್ಲನು. ಇವನು ಸಿದ್ಧಿ ಹಾಗೂ ಬುದ್ಧಿದೇವತೆಯಾಗಿ ವಿದ್ಯಾಧಿದೇವತೆ ಹಾಗೂ ರಾಷ್ಟ್ರದ ಅಧಿದೇವತೆಯಾಗಿದ್ದಾನೆ. ಇವನು ಯಾವುದೇ ಒಂದು ಪಂಥ ಅಥವಾ ಸಂಪ್ರದಾಯಗಳ ದೇವತೆಯಲ್ಲ. ಭಾರತೀಯ ಜನಾಂಗದ ಶತಶತಮಾನದ ಜೀವನಗಳಲ್ಲಿ ಹಾಸುಹೊಕ್ಕಾಗಿ ಬೆಳೆಯುತ್ತಾ ಬೆಳಗುತ್ತಾ ಬಂದಿರುವ ರಾಷ್ಟ್ರೀಯ ದೇವತೆ. ಸರ್ವದೇಶಸರ್ವಕಾಲದಲ್ಲಿ ನೆಲೆಸಿ, ಪೂಜಿಸಿಗೊಂಡ ವೇದಪ್ರತಿಪಾದ್ಯನಾದ ದೇವತೆ.

## ಅಲೌಕಿಕ ರೂಪವು

ಅನೇಕ ಪುರಾಣಗಳ ಸಾಮರಸ್ಯದ ಅಂತರಾರ್ಥ ವಿಚಾರದಿಂದ ಗಣಪತಿಯ ಅವತಾರವೇ **ಮೊತ್ತ ಮೊದಲನೆಯದಾದುದರಿಂದ ಇವನು ಆದಿಪೂಜ್ಯನಾಗಿದ್ದಾನೆ.** ಒಂದೊಂದು ಗುಣಗಳಿಂದ ಬ್ರಹ್ಮಾದಿ ತ್ರಿಮೂರ್ತಿಗಳ ಸಗುಣರೂಪ ಪ್ರಸಿದ್ಧವಾದಂತೆ **ಮೂರೂ ಗುಣಗಳ ಸಮಷ್ಟಿಯರೂಪ** ಈ ಮಹಾಗಣಪತಿ **ಯಾಗಿದ್ದಾನೆ.** ಮುಖದಿಂದ **ಗಜ** ಶರೀರದಿಂದ **ನರಾಕೃತಿ. ಇದುವೇ ಗಣಪತಿಯ ಅಲೌಕಿಕ ರೂಪವು.** ಜೀವ ಬ್ರಹ್ಮೈಕ್ಯದ ಅಖಂಡಾರ್ಥವುಳ್ಳ ಅದ್ವೈತ ತತ್ತ್ವದ ಸಂಕೇತ. ಇವನ ಆದಿಪೂಜೆಯಿಂದ ಸರ್ವಾರ್ಥಪ್ರಾಪ್ತಿಯೂ ತಿರಸ್ಕಾರದಿಂದ ಸರ್ವವಿನಾಶವೂ ವಿವರಿಸಲ್ಪಟ್ಟಿದೆ. **ವಿಘ್ನಬಾಹುಲ್ಯದಿಂದ ಧ್ಯೇಯಸಾಧನೆಯೆಂಬುವುದು ಮೃಗಜಲವಾಗಿ ಪರಿಣಮಿಸಿದ ಈ ಕಲಿಯುಗದಲ್ಲಿ** ಅಲ್ಪಪೂಜೆ-ಅಲ್ಪಸೇವೆಗಳಿಂದಲೇ ಪ್ರಸನ್ನನಾಗಿ ಅನಂತ ಫಲವನ್ನೀಯುವ ದೇವತೆಯೇ ಈ ಮಹಾಗಣಪತಿಯು.

## 'ಇವನು ಪ್ರಥಮಪತಿ'

ಈ ಗಣಪತಿಯ ಉಪಾಸನೆ ಕಲಿಯುಗದ ಕಲ್ಪದ್ರುಮವೆನ್ನಬಹುದು. ಜೀವ ಕೋಟಿಯ ಸಕಲ ಆಶೋತ್ತರಗಳ ಲಕ್ಷಣವೆನಿಸಿದ ಸಿದ್ಧಿಯೂ, ಮಾನವೀಯತೆಯ ಹೆಗ್ಗುರುತಾಗಿ ನಿಶ್ಚಯಾತ್ಮಕ ತತ್ತ್ವರೂಪದಿಂದ ಜ್ಞಾನಬೀಜವೆನಿಸಿದ ಬುದ್ಧಿಯೂ ಇವನ ಪತ್ನಿಯರು. ಬಾಲಕರು ವಿದ್ಯೆಯ ಆರಂಭದಲ್ಲಿ ಬರೆಯುವುದು '**ಶ್ರೀ ಗಣೇಶಾಯನಮಃ**' ಎಂಬ ಅವನ ನಾಮವನ್ನೇ. ಋಷಿ-ಮುನಿಗಳ ಯಜ್ಞ - ಯಾಗ ಗಳಲ್ಲಿಯೂ ಪೂಜೆಯ ಮೊದಲ ಪಂಕ್ತಿಯು ಗಣಪತಿಗೇ. ಅವನನ್ನು ಅಲಕ್ಷಿಸಿ ನಡೆದ **ರಾವಣನಂತಹ ರಾಕ್ಷಸಾಧಿಪತಿಗೂ** ವಿಫಲತೆಯೇ ಗತಿಯಾಯಿತು. ಆದುದರಿಂದ ಈ ಗಣಪತಿಯೇ **ಪ್ರಥಮಪತಿಯೂ** ಅಹುದು.

## ಗಣೇಶನ ಸ್ವರೂಪ

ಶ್ರೀ ಮಹಾಗಣಪತಿಗೆ ಯುಗಭೇದಗಳಿಂದ ಭಿನ್ನ ಭಿನ್ನರೂಪಗಳಿವೆ. ಕೃತ ಯುಗದಲ್ಲಿ ಸಿಂಹಾರೂಢನೂ ದಶಭುಜಗಳುಳ್ಳವನೂ ತೇಜೋರೂಪಿಯೂ 'ವಿನಾ ಯಕ'ನೆಂಬ ಹೆಸರಿನಿಂದ ಜನರಿಗೆ ವರದಾಯಕನಾಗಿದ್ದನು. ತ್ರೇತಾಯುಗದಲ್ಲಿ ಮಯೂರವಾಹನನೂ ಆರುಭುಜವುಳ್ಳವನೂ, ಧವಲ ವರ್ಣಾರಂಜಿತನೂ ಆಗಿದ್ದು 'ಮಯೂರೇಶ್ವರ'ನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು. ದ್ವಾಪರಯುಗದಲ್ಲಿ ಕೆಂಪು - ಕಪ್ಪುಗಳ ಮಿಶ್ರವರ್ಣದವನಾಗಿ ನೀಲ ಕುದುರೆಯನ್ನೇರಿ ವಿಹರಿಸುತ್ತ ಭುಜದ್ವಯಗಳಿಂದ ಒಪ್ಪುವನು. ಈ ಗಣಪತಿಯೂ ಹಿಂದೂ ದೇವತಾ ಸಮೂಹ ದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಆಕ್ರಮಿಸಿಕೊಂಡಿರುವ ಪಶು - ಮಾನವ ರೂಪದ ಒಂದು ದೇವತೆ. ಇವನು ದ್ವಿಮುಖ ವ್ಯಕ್ತಿತ್ವದ ದೇವತೆ. ಮೊದಲು ವಿಘ್ನ ಕಾರಿ ಮಾತ್ರ ಆಗಿದ್ದವನು ಕಾಲಕ್ರಮದಲ್ಲಿ ವಿಘ್ನನಾಶಕನೂ ಆದನು.

## ಗಣಪತಿಯ ವಿಕಾಸ

ಋಗ್ವೇದ ಕಾಲದಲ್ಲಿ ಕೇಳಿಬರುವ 'ಗಣಪತಿ' ಎಂಬ ಹೆಸರು 'ಬ್ರಹ್ಮಣಸ್ಪತಿ' ಎಂದೇ ಆಗಿರುವುದು. 'ಗಣಾನಾಂತ್ವಾಗಣಪತಿಂ' ಎಂಬ ಮಂತ್ರಕ್ಕೆ "ಎಲ್ಲೈ ಬ್ರಹ್ಮಣಸ್ಪ ತಿಯೇ ಪ್ರವೃದ್ಧವಾದ ಕರ್ಮಗಳಿಗೆ ಪ್ರಭುವಾದವನೂ, ದೇವಗಣಗಳಿಗೆ ಸಂಬಂಧಿಸಿ ದವನೂ, ಸ್ವರ್ಗಕ್ಕೆ ಒಡೆಯನೂ, ಕ್ರಾಂತಿದರ್ಶಿಗಳಾದ ಕವಿಗಳಲ್ಲಿ ಶ್ರೇಷ್ಠ ಕವಿ - ಎನಿಸಿಕೊಂಡವನೂ, ಅಪರಿಮಿತವಾದ ಅನ್ನವುಳ್ಳವನೂ, ಶ್ಲಾಘ್ಯರ ನಡುವೆ ಪ್ರಕಾಶಿ

ಸುವವನೂ, ಮಂತ್ರಗಳಿಗೆ ಒಡೆಯನಾದ ನಿನ್ನನ್ನು ಈ ಕರ್ಮ ನಿಮಿತ್ತವಾಗಿ ಕರೆಯುತ್ತೇವೆ. ನಮ್ಮ ಸ್ತುತಿಗಳನ್ನು ಕೇಳುತ್ತಾ ನಿನ್ನ ರಕ್ಷಣೆಗಳೊಡನೆ ಯಜ್ಞಗೃಹಕ್ಕೆ ಬಂದು ಕುಳಿತುಕೊ'' - ಎಂದು ಸಾಯಣರು ಭಾಷ್ಯ ಬರೆದಿರುವರು. ಈ ಮಂತ್ರದಲ್ಲಿನ ಗಣಪತಿ - ಬ್ರಹ್ಮಣಸ್ಪತಿ ಭೂಸ್ಥಾನದ ದೇವತೆ. ಋಗ್ವೇದದಲ್ಲಿ ಪ್ರಭಾವ ಶಾಲಿಗಳಾಗಿದ್ದ ಹಲವಾರು ದೇವತೆಯ ಗುಣಗಳನ್ನು ಮೈಗೂಡಿಸಿಕೊಂಡ ಹೊಸ ದೇವತೆ. ಗಣಪತಿ ಇವನಲ್ಲಿ ರುದ್ರ - ಮರತರಗುಣಗಳೂ, ಬೃಹಸ್ಪತಿ - ಮರುತರ ಆಯುಧಗಳೂ, ಇಂದ್ರನ ಶಕ್ತಿಯೂ ರೂಪುಗೊಂಡವು.

ಮಾನವನು ತನ್ನ ಪುರೋಭಿವೃದ್ಧಿಗೆ ಯಾವುದೋ ಅವ್ಯಕ್ತ ಶಕ್ತಿಯೊಂದು ತಡೆಗಟ್ಟುತ್ತಿದೆ. ತನ್ನ ಬಯಕೆಗಳು ಕೈಗೂಡಿದಾಗ 'ವಿಘ್ನ'ಗಳಿಗೂ ಅಧಿಪತಿಯಾದ ಒಂದು ದೇವತೆ ಇರಬೇಕು ಎಂದು ನಿರ್ಧಾರಕ್ಕೆ ಬಂದ. ವಿಘ್ನಗಳನ್ನು ನಿವಾರಿಸಿ ಅವನೇ ಸಿದ್ಧಿದಾಯಕನೂ ಆಗಬೇಕೆಂತ ಬಯಸಿ 'ಗಣಪತಿ'ಯನ್ನು ದೇವತೆಯನ್ನಾಗಿ ಅಳವಡಿಸಿಕೊಂಡನು ಎಂಬುದು ವೈಚಾರಿಕರ (ಈಗಿನವರ) ಮತ.

## ಪುರಾಣಗಳಲ್ಲಿ ಗಣಪತಿ

ಸ್ಕಾಂದ ಪುರಾಣದಲ್ಲಿ ''ಗೌರಿಯು ತನ್ನ ಮೈಯನ್ನು ಉಜ್ಜಿ, ಬಂದ ಕೊಳೆಯಿಂದ ಕ್ರೀಡಾರ್ಥವಾಗಿ ಪುರುಷಾಕಾರದ, ಆನೆತಲೆಯ, ನಾಲ್ಕು ತೋಳುಗಳ, ಮೋಟು ತೊಡೆಗಳ ಗೊಂಬೆಯೊಂದನ್ನು ಸೃಷ್ಟಿಸಿ ಶಿವನನ್ನು ಕುರಿತು 'ಪ್ರಭುವೇ ಇವನಿಗೆ ಜೀವವನ್ನು ನೀಡು' ಎಂದಳು. ಶಿವನು ಸೃಷ್ಟಿ ಸೂಕ್ತದಿಂದ ಅದನ್ನು ಮುಟ್ಟಿ, ಜೀವ ಸೂಕ್ತದಿಂದ ಪ್ರಾಣವನ್ನು ಕೊಟ್ಟನು. ಅನಂತರ ಅವನು ಪಾರ್ವತಿಯನ್ನು ಕುರಿತು ''ಚತುರ್ಥಿಯ ದಿನ ಜೀವ ಸೂಕ್ತದಿಂದ ನಿರ್ಮಿತನಾದ ನಿನ್ನ ಈ ಮಗನು ಸಕಲಗಣಗಳಿಗೂ ಅಧ್ಯಕ್ಷನಾಗಲಿ, ಚತುರ್ಥಿಯ ದಿನ ಇವನನ್ನು ಪೂಜಿಸುವ ಎಲ್ಲರ ವಿಘ್ನಗಳೂ ನಿವಾರಣೆಯಾಗಲಿ ಎಂದು ವರವಿತ್ತನು. ಆದುದರಿಂದ ಗಣಪತಿಯು ಚತುರ್ಥೀ ತಿಥಿ ಪೂಜ್ಯನಾದನು.

ಮುದ್ಗಲ ಪುರಾಣ ಮತ್ತು ಗಣೇಶ ಪುರಾಣ - ಇವೆರಡು ಪುರಾಣಗಳೂ ಗಣಪತಿಯ ಮಹಿಮೆಯನ್ನು ಸಾರಲೆಂದೇ ಬರೆದವುಗಳಾಗಿವೆ. ಗಣಪತಿಯೇ ಪರಬ್ರಹ್ಮ, ಸಮಸ್ತ ಋಷಿಗಳೂ ಗಣಪತಿಯ ಮಹಿಮೆಯಿಂದಲೇ ಬ್ರಹ್ಮಸಾಕ್ಷಾತ್ಕಾರ ಪಡೆದರು ಎಂದೂ, ಇಂದ್ರಾದಿ ದೇವತೆಗಳೂ ಗಣಪತಿಯನ್ನು ಪೂಜಿಸಿ ಅವನ ಕೃಪೆಗೆ ಪಾತ್ರರಾದನಂತರವೇ ಅವರಿಗೆ ತಮ್ಮ ತಮ್ಮ ಕೆಲಸಗಳನ್ನು ಸುಗಮವಾಗಿ

ನಿರ್ಮಿಸಲು ಸಾಧ್ಯವಾಯಿತು ಎಂತಲೂ ತಿಳಿಸಿದೆ. ಮುದ್ಗಲ ಪುರಾಣದಲ್ಲಂತೂ, ಪ್ರಳಯಾಂತ್ಯದಲ್ಲಿ ಬಾಲಗಣಪತಿ ಆಲದ ಎಲೆಯ ಮೇಲೆ ತೇಲುತ್ತಿದ್ದನೆಂದೂ, ಸೃಷ್ಟಿಕರ್ತನು ಆತನನ್ನು ಪೂಜಿಸಿ ಸೃಷ್ಟಿಕಾರ್ಯ ಆರಂಭಿಸಿದನೆಂದೂ ಹೇಳಲಾಗಿದೆ.

ಸಿಂಧು - ಎಂಬ ರಾಕ್ಷಸನ ನಿಗ್ರಹಕ್ಕಾಗಿ ಪಾರ್ವತಿ ಗಣಪತಿ ಮಂತ್ರವನ್ನು ಅನುಷ್ಠಾನ ಮಾಡಿದಾಗ, ಸುಪ್ರೀತನಾದ ಗಣೇಶ, ಮಹಾಚತುರ್ಥಿಯಂದು ಪಾರ್ವತಿ ಪೂಜಿಸುತ್ತಿದ್ದ ಮಣ್ಣಿನ ವಿಗ್ರಹದಿಂದ ಉದ್ಭವಿಸಿ, ಅವಳ ಮಗನಾದ ಎಂತಲೂ, ಬೇರೆ ಬೇರೆ ಪುರಾಣಗಳಲ್ಲಿ ಹೇಳಿರುವ ಬೇರೆ ಬೇರೆ ದೇವತೆಗಳ ಮಹತ್ಕಾರ್ಯವೆಲ್ಲವೂ ಗಣಪತಿಗೇ ಅನ್ವಯಿಸಲ್ಪಟ್ಟಿವೆ.

## ಆನೆತಲೆ

ಸ್ಕಾಂದ, ಲಿಂಗ, ವಾಮನ, ಪದ್ಮ ಪುರಾಣಗಳಲ್ಲಿ ಹಾಗೂ ಶಿವರಹಸ್ಯದಲ್ಲಿ ಗಣಪತಿ 'ಗಜಮುಖ'ನಾಗಿಯೇ ಹುಟ್ಟಿದನೆಂದು ಹೇಳಲಾಗಿದೆ. ಶಿವಪುರಾಣ ಮತ್ತು ಬ್ರಹ್ಮವೈವರ್ತ ಪುರಾಣಗಳಲ್ಲಿ ಮಾತ್ರ ಪುರುಷಾಕಾರವಾಗಿಯೇ ಸೃಷ್ಟಿಯಾದ ಗಣಪತಿಗೆ 'ಮೂಲತಲೆ'ಯನ್ನು ತರಿದ ಶಿವನು ಗಜಶಿರವನ್ನು ಜೋಡಿಸಿದನೆಂದಿದೆ.

## ಆನೆತಲೆಯೇ ಏಕೆ ?

ಪದ್ಮಕಲ್ಪದಲ್ಲಿ ಒಮ್ಮೆ ಮಹೇಂದ್ರನು ರಂಭೆಯೊಂದಿಗೆ ಪುಷ್ಪಭದ್ರಾ ತೀರದಲ್ಲಿ ರಮಿಸುತ್ತಿದ್ದನು. ಆಗ ವೈಕುಂಠದಿಂದ ಕೈಲಾಸಕ್ಕೆ ಹೋಗುತ್ತಿದ್ದ ದೂರ್ವಾಸಮುನಿ ಆ ಮಾರ್ಗವಾಗಿ ಬಂದನು. ಇಂದ್ರನು ಮುನಿಗೆ ನಮಸ್ಕರಿಸಲು ದೂರ್ವಾಸನು ವಿಷ್ಣುವಿನ ಪ್ರಸಾದವನ್ನಿತ್ತನು. ದುರಹಂಕಾರದಿಂದ ಆ ಪ್ರಸಾದವನ್ನು ಇಂದ್ರನು ಐರಾವತದ ತಲೆಯಮೇಲೆ ಎಸೆದನು. ಕೂಡಲೇ, ಅದು ಇಂದ್ರನನ್ನು ಬಿಟ್ಟು, ಸ್ವೇಚ್ಛೆಯಾಗಿ ವಿಹಾರಕ್ಕೆ ತೆರಳಿ ಅಡವಿಯಲ್ಲಿ ಹೆಣ್ಣಾನೆಯೊಂದಿಗೆ ಸುಖಸಂಸಾರ ಸಾಗಿಸಿತು. ಗಣಪತಿಗೆ ತಲೆಯೊಂದು ಬೇಕಾದಾಗ ವಿಷ್ಣುವು ಆ ತಲೆಯನ್ನೇ ಕಡಿದು ತಂದನು.

## ಏಕದಂತ !

1. ಕಾರ್ತವೀರ್ಯಾರ್ಜುನನನ್ನು ನಿಗ್ರಹಿಸಿದ ಪರಶುರಾಮನು ಕೈಲಾಸಕ್ಕೆ ಶಿವದರ್ಶನಾಕಾಂಕ್ಷಿಯಾಗಿ ಬಂದಾಗ ಶಿವನು ಪಾರ್ವತಿಯೊಂದಿಗೆ ಏಕಾಂತದಲ್ಲಿರುವನು. ಅಲ್ಲಿಗೂ ಧಾವಿಸಲು ಪ್ರಯತ್ನಿಸಿದ ಅವರನ್ನು ಗಣಪತಿಯು ತಡೆ ಹಿಡಿದು

ಸ್ವಲ್ಪಕಾಯಬೇಕೆಂದನು. ಬಹುವಾಗ್ವಾದ ಮೇಲೆ ಕಂಠಾರವೊಂದನ್ನು ಗಣಪತಿಯ ಮೇಲೆ ಪರಶುರಾಮರು-ಎಸೆದರು. ಆ ಕಂಠಾರವು ತನ್ನ ತಂದೆ ಶಿವನೇ ಅವನಿಗೆ ಕೊಟ್ಟಿದ್ದು. ತಂದೆಯ ಆಯುಧವನ್ನು ವಿರೋಧಿಸುವುದು ಸಲ್ಲದೆಂದು ಗಣಪತಿಯು ಸುಮ್ಮನಿರಲು ಆ ಕುಠಾರವು ಒಂದು ದಂತವನ್ನು ಭಗ್ನಗೊಳಿಸಿತು.

2. ಷಣ್ಮುಖನು ಸ್ತ್ರೀ-ಪುರುಷ ಲಕ್ಷಣಶಾಸ್ತ್ರವೊಂದನ್ನು ರಚಿಸುತ್ತಾನೆ. ಅದರಲ್ಲಿ ಸೂಚಿತವಾದ ಯಾವ ಲಕ್ಷಣವೂ ತನ್ನಲ್ಲಿ ಇಲ್ಲದಿರುವುದನ್ನು ನೋಡಿ ಗಣಪತಿಯು ರಚನೆಗೆ ವಿಘ್ನವುಂಟು ಮಾಡುತ್ತಾನೆ. ಷಣ್ಮುಖನು ಕುಪಿತನಾಗಿ ಅವನ ಒಂದು ದಂತವನ್ನು ಮುರಿದಿಕ್ಕುತ್ತಾನೆ (ಭವಿಷ್ಯ ಪುರಾಣ).

3. ಭಾದ್ರಪದ ಚೌತಿಯಂದು ಲಂಬೋದರನಾದ ಗಣಪತಿ ಇಲಿಯ ಮೇಲೆ ಕುಳಿತು ಹೋಗುವುದನ್ನು ನೋಡಿ ನಕ್ಕ ಚಂದ್ರನನ್ನು ಶಿಕ್ಷಿಸಲು ಗಣಪತಿ ತನ್ನ ಒಂದು ದಂತವನ್ನು ಮುರಿದು ಅವನತ್ತ ಎಸೆದನು-ಎಂಬುವುದು ಲೋಕರೂಢವಾದ ಕಥೆ.

## ಗಣಪತಿಯ ಪ್ರಭೇದಗಳು

ಯುಗಭೇದಗಳಿಂದ ಗಣಪತಿಯಲ್ಲೂ ಅನೇಕ ಪ್ರಭೇದಗಳು ಕಂಡುಬರುವುವು. ಮುದ್ಗಲ ಪುರಾಣದಲ್ಲಿ ತಿಳಿಸಿದಂತೆ ಗಣಪತಿಯಲ್ಲಿ 32 ಪ್ರಭೇದಗಳಿವೆ. ಇವೆಲ್ಲಕ್ಕೂ ಬೇರೆ ಬೇರೆ ಸ್ವರೂಪ, ಧ್ಯಾನ, ಮೂಲ ಮಂತ್ರಗಳಿವೆ. ಅವುಗಳಲ್ಲಿ ಈಗ ಹೆಚ್ಚಾಗಿ ಪ್ರಚಾರವಿರುವುದು, 1) ಶಕ್ತಿಗಣಪತಿ 2) ಸಿದ್ಧಿಗಣಪತಿ 3) ಕ್ಷಿಪ್ರಗಣಪತಿ 4) ಹೇರಂಬ ಗಣಪತಿ 5) ಲಕ್ಷ್ಮೀಗಣಪತಿ 6) ಮಹಾ ಗಣಪತಿ 7) ಸಂಕಷ್ಟಹರಗಣಪತಿ 8) ವರದ ಗಣಪತಿ 9) ಪ್ರಸನ್ನಗಣಪತಿ 10) ಹರಿದ್ರಾಗಣಪತಿ.

## ವರಸಿದ್ಧಿ ವಿನಾಯಕ

ಭಾದ್ರಪದ ಶುದ್ಧ ಚೌತಿಯಂದು ನಾವೆಲ್ಲ ಪೂಜಿಸುವ ವರಸಿದ್ಧಿ ವಿನಾಯಕನಿಗೆ 4 ಕೈಗಳು, 2 ಕೈಗಳಲ್ಲಿ ಪಾಶಾಂಕುಶಗಳನ್ನು ಧರಿಸಿ, ಇನ್ನೆರಡು ಕೈಗಳಲ್ಲಿ ವರದಾಭಯಗಳನ್ನು ಧರಿಸಿರುವನು. ಸರ್ಪಯಜ್ಞೋಪವೀತವನ್ನು ಧರಿಸಿರುವ ಇವನ ವಾಹನ ಇಲಿ. ಇವನು ಬ್ರಹ್ಮಚಾರಿ. ಗಣಪತಿ ಪ್ರಭೇದಗಳಲ್ಲಿ ಇವನಿಗೆ ಮಾತ್ರ ಮದುವೆ ಇಲ್ಲ. ಇವನು ವಟು.

## ಮಹಾಗಣಪತಿ

ಕಬ್ಬಿನ ರಸದ ಸಮುದ್ರ ಮಧ್ಯದಲ್ಲಿ ರತ್ನದ್ವೀಪ. ಅದರ ನಡುವೆ ಪಾರಿಜಾತ ವೃಕ್ಷ, ಅದರ ಕೆಳಗೆ ಸಿಂಹಾಸನ, ಅದರ ಮೇಲೆ 6 ದಳಗಳ ಕಮಲದ ನಡುವಿನ

ತ್ರಿಕೋಣದಲ್ಲಿ 10 ಕೈಗಳ 3 ಕಣ್ಣುಗಳ ಮಹಾಗಣಪತಿ ಮಂಡಿಸಿರುವನು. ಬಲಭಾಗದ 5 ಕೈಗಳಲ್ಲಿ ಪುರುಷಾಯುಧಗಳೂ ಎಡಭಾಗದ 5 ಕೈಗಳಲ್ಲಿ ಸ್ತ್ರೀಆಯುಧಗಳು ಇರುವುವು. ಸೊಂಡಿಲಿನಲ್ಲಿರುವ ರತ್ನಕುಂಭದಿಂದ ರತ್ನಾಭರಣಗಳನ್ನು ಸುರಿಸುತ್ತಿರುವ ಮತ್ತು ವಲ್ಲಭಾ ಶಕ್ತಿಯನ್ನು ಆಲಿಂಗಿಸಿಕೊಂಡಿರುವ ಈ ಮಹಾಗಣಪತಿಯ ಆರಾಧನೆ ಬಹಳ ವಿಶೇಷವಾದುದು. ಈತನಿಗೆ ಅಷ್ಟ ದ್ರವ್ಯದಿಂದ ಹವನ ಮಾಡುವರು. ತಂತ್ರಶಾಸ್ತ್ರಜ್ಞರುಇವನನ್ನೇ ಮೂಲಧಾರ ಚಕ್ರದೇವತೆಯೆಂದು ತಿಳಿಸಿ, ಈತನನ್ನು 28 ಅಕ್ಷರಗಳ ಮಹಾಮಂತ್ರದಿಂದ ಉಪಾಸನೆ ಮಾಡಿಯೇ ಉಳಿದ 5 ಚಕ್ರಗಳ ಉಪಾಸನೆಯನ್ನು ತಿಳಿಸಿರುವರು.

ಭಂಡಾಸುರನೊಂದಿಗೆ ಶ್ರೀಲಲಿತಾದೇವಿ ಯುದ್ಧದಲ್ಲಿ ನಿರತಳಾಗಿದ್ದಾಗ ವಿಶುಕ್ರನು ಎಂಟು ಶೂಲಗಳೂ ಎಂಟು ಕೋಣಗಳೂ ಉಳ್ಳ 'ಜಯವಿಘ್ನ' ಎಂಬ ಹೆಸರಿನ ಯಂತ್ರವನ್ನು ಎರಡು ಕ್ರೋಶವಿಸ್ತಾರವುಳ್ಳ ಕಲ್ಲಿನಮೇಲೆ ಬರೆದು ದೇವಿಯ ಸೈನ್ಯದ ಮೇಲೆ ಪ್ರಯೋಗಿಸಿದನು. ಆಗ ದೇವಿಯು ಮಹಾಗಣಪತಿಯನ್ನು ಸೃಷ್ಟಿಸಿ ಆ ವಿಘ್ನಯಂತ್ರ ಪ್ರಹರ್ಷಿತಾ) (ಕಾಮೇಶ್ವರ ಮುಖಾಲೋಕ ಕಲ್ಪಿತ ಶ್ರೀಗಣೇಶ್ವರಾ )-ವನ್ನು ಪುಡಿಮಾಡಿದ್ದನ್ನು ಕಂಡು ಹರ್ಷಿತಳಾದಳು (ಮಹಾಗಣೇಶನಿರ್ಭಿನ್ನ ವಿಘ್ನಯಂತ್ರ ಪ್ರಹರ್ಷಿತಾ) ಕಾಮೇಶ್ವರ ಮುಖಾಲೋಕ ಕಲ್ಪಿತ ಶ್ರೀಗಣೇಶ್ವರಾ-ಶ್ರೀಮಾತೆಯು ತನ್ನ ಪತಿಯಾದ ಕಾಮೇಶ್ವರನ ಮುಖಾವಲೋಕನದಿಂದಲೇ ಈ ೨೮ ಅಕ್ಷರಗಳುಳ್ಳ ಮಹಾಗಣಪತಿಯನ್ನು ಸೃಷ್ಟಿಸಿದಳು-ಎಂದಿದೆ.

ಗಣಪತಿಯು ಮೂಲಾಧಾರಕ್ಷೇತ್ರಸ್ಥಿತ. ಮೂಲಾಧಾರತತ್ತ್ವವುಪೃಥ್ವೀತತ್ತ್ವ, ರಕ್ತವರ್ಣ. ಈ ಎರಡಕ್ಕೂ ಗಣಪತಿಗೂ ನಿಕಟಸಂಬಂಧವಿರುವುದು. ಗಣಪತಿ ಮಣ್ಣಿನಮಗ. ಪಾರ್ವತಿಯ ಮೈ ಮಣ್ಣಿನಿಂದ ಸೃಷ್ಟನಾದವನು, ಪೃಥ್ವೀತತ್ತ್ವವು ಮಣ್ಣಿಗೆ ಸಂಬಂಧಿಸಿದುದಾಯಿತು. ಮೂಲಾಧಾರ ಚಕ್ರದ ದಳಗಳ ಬಣ್ಣಕೆಂಪು, ಆದ್ದರಿಂದಲೇ ಆ ಕ್ಷೇತ್ರಸ್ಥಿತನಾದಗಣಪತಿಗೆ ಕೆಂಪು ಬಣ್ಣ ಪ್ರಿಯವಾದುದು.

ಗಣಪತಿಯ ಏಕದಂತ ಅದ್ವೈತದ ಪ್ರತೀಕ. ಅವನು ತನ್ನ ಭಗ್ನದಂತವನ್ನು ಕೈಯಲ್ಲಿ ಹಿಡಿದಿರುವುದು ವಿದ್ಯಾಭಿಮಾನಿದೇವತೆಯಾದುದರಿಂದ. ಅದು ಲೇಖನಿಯ ಪ್ರತೀಕವೆನ್ನುವರು.

ಅವನು ಶೂರ್ಪಕರ್ಣ. ಮೊರದಲ್ಲಿ ಧಾನ್ಯವನ್ನು ಕೋರಿದಾಗ ಹೊಟ್ಟುಕಾಳು ಬೇರೆಯಾಗುವುವು. ಹಾಗೆಯೇ ಗಣೇಶನು ಮಾಯೆಯನ್ನು ಸತ್ಯದಿಂದ ಬೇರ್ಪಡಿಸುವನು.



ಗಜಾನನನೂ ಹೌದು. ಪ್ರಾಣಿವರ್ಗದಲ್ಲಿ ಎಲ್ಲಕ್ಕಿಂತ ಆನೆ ತಲೆಯೇ ದೊಡ್ಡದು ಅದರಲ್ಲೂ ಏಕದಂತವುಳ್ಳ ಆನೆಯ ತಲೆ, ದ್ವಂದ್ವಾರ್ಥಗಳಿಗೆ ಎಡೆಯಿಲ್ಲದ ವಿಶೇಷ ಬುದ್ಧಿ ಶಕ್ತಿಯನ್ನು ಸೂಚಿಸುತ್ತದೆ.

**ಮನುಷ್ಯನ ತಲೆಯಲ್ಲಿ** ಜ್ಞಾನೇಂದ್ರಿಯ ಜ್ಞಾನ ಶಕ್ತಿ-ಮಾತ್ರ ಇದ್ದರೆ, **ಆನೆಯ ತಲೆಯಲ್ಲಿ ಕರ್ಮೇಂದ್ರಿಯವೂ** ಉಂಟು. ಆನೆಯ ತಲೆಯನ್ನು ಮನುಷ್ಯ ದೇಹಕ್ಕೆ ಸೇರಿಸುವುದೆಂದರೆ **ಅಭೇದಸಾಧಕತ್ವದ, ಸಮನ್ವಯಕಾರಕತ್ವದ ಸಂಕೇತವು.** ಗಣೇಶನ ಪತ್ನಿಸಿದ್ಧಿ ಬುದ್ಧಿಯರಿಬ್ಬರಿಗೂ ಇಬ್ಬರು ಮಕ್ಕಳು. ಸಿದ್ಧಿಯ ಮಗನಿಗೆ **ಲಾಭ** ಎಂದು ಹೆಸರು. ಬುದ್ಧಿಯ ಮಗನಿಗೆ **ಲಕ್ಷ್ಯ** ಎಂದು ಹೆಸರು.

ಬುದ್ಧಿ ಅಥವಾ ವಿವೇಕ-ಸರಿಯಾಗಿದ್ದರೆ **ಲಕ್ಷ್ಯ ಅಥವಾ ಗುರಿ** ನಿರ್ಮಾಣವಾಗುವುದು, ಆ ಗುರಿಯನ್ನು ತಲುಪುವ ಶಕ್ತಿಯೂ ಲಭ್ಯವಾಗುತ್ತದೆ. ಅದೇ **ಲಾಭ** ಎಂಬುವುದು.

## ಬುದ್ಧಿಸಾಗರ

ಜನನಾಯಕರಾಗಬೇಕೆಂದು ಬಯಸುವವರು ಗಣಪತಿಯನ್ನು ಪೂಜಿಸಲೇ ಬೇಕು.

ಸ್ವಪ್ರತಿಷ್ಠೆಯಿಂದ ನಾಯಕರಾಗಲು ಬಯಸುವವರು ನಾನಾಕಷ್ಟಗಳನ್ನು ಅನುಭವಿಸಬೇಕಾಗುವುದು. ತಮ್ಮ ಸ್ವಂತ ಅಭಿಪ್ರಾಯವನ್ನು ಬಿಟ್ಟು ಬಹುಜನರ ಅಭಿಪ್ರಾಯವನ್ನು ಗೌರವಿಸಬೇಕಾಗುವುದು **(ಗಣಪತಿ ತನ್ನ ಸ್ವಂತ ತಲೆಯನ್ನು ಬಿಟ್ಟು ಆನೆಯ ತಲೆಯನ್ನು ಪಡೆದ)** ಎಲ್ಲಕ್ಕೂ ದೊಡ್ಡತಲೆ. ಎಲ್ಲರ ಅಭಿಪ್ರಾಯಗಳನ್ನೂ ಒಳಗೊಳ್ಳತಕ್ಕ ತಲೆ. ಆನೆಯ ತಲೆಯಲ್ಲಿ **ಜ್ಞಾನೇಂದ್ರಿಯದ ಜೊತೆಯಲ್ಲಿ ಪ್ರಧಾನ ಕರ್ಮೇಂದ್ರಿಯವಾದ ಸೊಂಡಿಲೂ ಇದೆ.)** ಅಂದರೆ ಜನನಾಯಕರಾಗಬೇಕೆನ್ನುವವರು ಕೇವಲ ಜ್ಞಾನಿಗಳು ಅಥವಾ ಬುದ್ಧಿ ಶೀಲರಾದರೆ ಸಾಲದು **ಕರ್ಮಶೀಲರೂ ಆಗಬೇಕು.**

ಗಣಪತಿಗೆ **ಬುದ್ಧಿಸಾಗರ** ಎಂಬ ವಿಶೇಷಣವುಂಟು. ಅವನ ಬುದ್ಧಿಸಾಮರ್ಥ್ಯವನ್ನು ಬಣ್ಣಿಸುವ ಹಲವಾರು ಕತೆಗಳುಂಟು. ದೇವತೆಗಳು ಶಕ್ತಿಯನ್ನು ಬಳಸಿ ಗೆಲ್ಲಲು ಸಾಧ್ಯವಿಲ್ಲ ಎಂದಾಗ ಗಣಪತಿಯನ್ನು ಮೊರೆ ಹೋಗುವರು.

1. **ಅಗಸ್ತ್ಯರು ಕಾವೇರಿಯನ್ನು** ಕಮಂಡಲುವಿನಲ್ಲಿ ತುಂಬಿಕೊಂಡಾಗ **ಗಣಪತಿ ಕಾಗೆಯಂತೆ ರೂಪತಾಳಿ** ಅದನ್ನು ಉರುಳಿಸಿ ಹಾರಿಹೋದನಂತೆ.

2. ಶಿವನು ಕೊಟ್ಟಿರುವ ಆತ್ಮಲಿಂಗವನ್ನು ತತ್ತರಿಸಿದ ದೇವತೆಗಳಿಗಾಗಿ ಬ್ರಹ್ಮಚಾರಿಯಾಗಿ ನೆಲದ ಮೇಲಿಟ್ಟನು.

3. **ಶಿವಪಾರ್ವತಿಯರನ್ನೇ ನಮಸ್ಕರಿಸಿ** ಭೂಪ್ರದಕ್ಷಿಣೆಯ ಸ್ಪರ್ಧೆಯಲ್ಲಿ ಗೆದ್ದನು.

## ಗಣಪತಿಯ ಪೂಜಾಫಲ

ದೇವತಾ ಉಪಾಸಕರು ತಮ್ಮ ಅನುಷ್ಠಾನ ನಿರ್ವಿಘ್ನವಾಗಿ ನೆರವೇರಲೆಂದು ಮೊದಲು ಗಣಪತಿಯನ್ನು ಪ್ರಾರ್ಥಿಸಿಕೊಳ್ಳಲೇ ಬೇಕು. ಗಣಪತಿಗೆ "ವಿಘ್ನೇಶ್ವರ" ಎಂಬ **ಹೆಸರೇ** ಸ್ವಾರಸ್ಯಕರವಾದುದು. ಅವನು ಕೇವಲ ವಿಘ್ನಗಳಿಗೆ ಒಡೆಯ ನಲ್ಲ. **ವಿಘ್ನಗಳನ್ನು ಉಂಟುಮಾಡಬಲ್ಲ, ನಿವಾರಿಸಲೂ ಬಲ್ಲ.** ಮಾನವನು ತಾನು, ಸರ್ವತಂತ್ರ ಸ್ವತಂತ್ರನೆಂಬ ದುರಭಿಮಾನವನ್ನು ಬೆಳೆಸಿಕೊಳ್ಳದಿರಲಿ - ಎಂದು ಅವನು ವಿಘ್ನಗಳನ್ನು ಉಂಟು ಮಾಡುತ್ತಾನೆ. **ತನಗಿಂತಲೂಶಕ್ತಿಸಂಪನ್ನರಾದ ದೇವರು** - ಎಂಬ ಒಂದು **ವಿಶಿಷ್ಟಶಕ್ತಿ** ಉಂಟು ಎಂಬ ವಿನೀತ ಭಾವದಿಂದ ಜೀವನವನ್ನು ಎದುರಿಸುವವರ ವಿಘ್ನಗಳನ್ನು ನಿವಾರಿಸುತ್ತಾನೆ.

**ಆಧ್ಯಾತ್ಮಿಕವಾಗಿ ಗಣಪತಿಯನ್ನು ಪ್ರಣವ ಸ್ವರೂಪ** ನೆಂದು ಭಾವಿಸಲಾಗಿದೆ. ಬ್ರಹ್ಮನ 'ನಿರ್ಗುಣತ್ವ' ವೇ ಪ್ರಣವ. ಪರಬ್ರಹ್ಮವೆಂದರೆ **ಲಿಂಗಭೇದವಿಲ್ಲದ ವಸ್ತು**, ಗಣಪತಿಯ ಬಲಗಡೆಯ ದಂತ ಭಗ್ನವಾಗಿರುವುದರಿಂದ ಆ ಭಾಗ ಸ್ತ್ರೀಯನ್ನೂ ಎಡಭಾಗ ಪುರುಷನನ್ನೂ ಪ್ರತಿನಿಧಿಸುತ್ತದೆ. ಶಿವನು **ಅರ್ಧನಾರೀಶ್ವರ**ನಾಗಿ ಪ್ರಕೃತಿ - ಪುರುಷರ ಏಕತೆಯನ್ನು ಪ್ರತಿ ನಿಧಿಸುವಂತೆಯೇ ಗಣಪತಿಯೂ ಪ್ರತಿ ನಿಧಿಸುತ್ತಾನೆ. **ದಶಭುಜ ಮಹಾಗಣಪತಿಯ ಬಲಭಾಗದ 5 ಕೈಗಳಲ್ಲಿ** ವಿಷ್ಣು, ಶಿವ, ಮನ್ಮಥ, ವರಾಹ ಮತ್ತು ಸ್ವಯಂ ಗಣಪತಿಯ **ಲಾಂಛನಗಳನ್ನು ಕಾಣಬಹುದಾದರೆ, ಎಡಭಾಗದ 5 ಕೈಗಳಲ್ಲಿ** ಲಕ್ಷ್ಮಿ, ಪಾರ್ವತೀ, ರತಿ, ಭೂದೇವಿ ಮತ್ತು ಪುಷ್ಟಿಯರ ಲಾಂಛನಗಳನ್ನು ಕಾಣಬಹುದಾಗಿದೆ - ಎಂಬುವುದನ್ನೂ ಇಲ್ಲಿ ಸ್ಮರಿಸ ಬಹುದಾಗಿದೆ.

ಅದಕ್ಕಾಗಿಯೇ ಆಚಾರ್ಯರು 'ಗಣೇಶ ಪಂಚರತ್ನಸ್ತೋತ್ರದಲ್ಲಿ' **ಸಮಸ್ತ ಲೋಕಶಂಕರಂ** ಎಂದು ಸಂಬೋಧಿಸಿರುವರು. ಆ ಮಾತು ಸತ್ಯವಾಗಲಿ. ಸಮಗ್ರ ಜನರಿಗೂ ಅವನು ಮಂಗಳದಾಯಕನಾಗಲಿ—ಎಂದು ನಾನೂ ಆ ಮಾತಿಗೆ ದನಿಗೂಡಿಸುವೆನು.



# ಶ್ರೀ ಮಹಾಗಣಪತಿಯ ಸ್ವರೂಪದ ಸಂಕೇತಗಳು

## ಗಜವದನ

ನಮಗೆ ಆನೆಯನ್ನು ನೋಡಿದಷ್ಟೂ ಸಂತೋಷ - ಆನೆ - ಎದೆಗಾರಿಕೆ, ಕಷ್ಟ ಸಹಿಷ್ಣುತೆ - ಇವುಗಳ ಸಂಕೇತ. ಹಿಂದೆ ರಾಜಮಹಾರಾಜರು ಯುದ್ಧದಲ್ಲಿ ಆನೆಯನ್ನು ಬಳಸುತ್ತಿದ್ದರು. ಇಂದಿಗೂ, ಕಷ್ಟದ, ಭಾರವನ್ನೆತ್ತುವ - ಕೆಲಸಗಳಿಗೆ ಆನೆಯನ್ನು ಬಳಸುವರು.

ಜೀವನ ಸಮರದಲ್ಲಿ ನಾವು ಜಯಶೀಲರಾಗಲು ನಮ್ಮಲ್ಲಿ ಆನೆಯಂತಹ ಸಾಮರ್ಥ್ಯ, ಎದೆಗಾರಿಕೆ, ಕಷ್ಟಸಹಿಷ್ಣುತೆ - ಇರಬೇಕು.

## ಏಕದಂತ

ಗಣಪತಿಯದು ಏಕದಂತ. ಎರಡಿದ್ದಿದ್ದರೆ ತುಂಬ ಚೆನ್ನಾಗಿ ಶೋಭೆ ಬರುತ್ತಿತ್ತು. **ದಂತವು ಸುಖ - ಸೌಂದರ್ಯ, ಶಕ್ತಿಗಳ ಸಂಕೇತ.** ಗಣಪತಿಯು ತನ್ನ ಒಂದು ದಂತವನ್ನು ಮುರಿದು ವೇದವ್ಯಾಸರ ಬಯಕೆಯಂತೆ ಭಾರತವನ್ನು ಬರೆಯಲು ಬಳಸಿದನು. ಹಾಗೆಯೇ ಮಾನವರೂ ಕೂಡ ತಮ್ಮ ಸುಖ-ಸೌಕರ್ಯಗಳನ್ನು ತಾವು ಸ್ವಲ್ಪ ಇಟ್ಟುಕೊಂಡು ಉಳಿದವುಗಳನ್ನು ಪರೋಪಕಾರಕ್ಕೆ ಬಳಸಬೇಕು.

## ಲಂಬೋದರ

ಗಣಪತಿಯ ಉಬ್ಬಿದ ಉದರವು **ಅವನಲ್ಲಿ ಈ ಪಿಂಡಾಂಡ - ಬ್ರಹ್ಮಾಂಡ ಗಳು**-ಸೇರಿವೆ ಎಂಬುವುದನ್ನು ಸೂಚಿಸುತ್ತವೆ. ಈ ಪಿಂಡಾಂಡ - ಬ್ರಹ್ಮಾಂಡಗಳು **ಯೋಗ ಮಾಯೆಯಿಂದ ಹಿಡಿದು ಬಂಧಿಸಲ್ಪಟ್ಟಿವೆ** ಎಂಬುವುದನ್ನು— ಅವನ ಉದರದಲ್ಲಿ **ಸುತ್ತಿರುವ ಸರ್ಪವು** ಸೂಚಿಸುತ್ತದೆ.

## ಮೂಷಕವಾಹನ

ಗಣಪತಿಯ ವಾಹನ ಇಲಿ, ಇದು **ಚಂಚಲತೆಯ ಪ್ರತೀಕ. ಸೂಕ್ಷ್ಮಶಕ್ತಿಯ ದ್ಯೋತಕ.** ದೇವರನ್ನು ನಂಬಿ, ಅವನ ಶರಣರು ಆದರೆ (**ಅವನು ನಮ್ಮ ಜೀವನದ ರಥವನ್ನು ಹತ್ತಿ ಕುಳಿತುಕೊಳ್ಳುವಂತೆ ಪ್ರಾರ್ಥಿಸಿದರೆ**) ಇಲಿಯೂ ಹೇಗೆ ಗಣಪತಿಯ ವಾಹನವಾಗಿದ್ದು ಶಾಂತಿ - ಸುಖಗಳಿಂದ ಬಾಳುವುದೋ ಹಾಗೆಯೇ ನಮ್ಮ ಬದುಕೂ ಕೂಡ **ಚಂಚಲತೆ, ಅಸ್ಥಿರತೆ**ಗಳಿಂದ ರಕ್ಷಿತವಾಗಿ ಸೂಕ್ಷ್ಮ ಶಕ್ತಿಯಿಂದ ಕೂಡಿ ಅರಳಿ ಬೆಳಗುವುದು.

## ಗಣಪತಿಯ ಸಮಗ್ರ ಕಲ್ಪನೆ

ಇವನ ಸಮಗ್ರ -ಕಲ್ಪನೆ ಓಂಕಾರದ ಸ್ವರೂಪದಿಂದ ರೂಪುಗೊಂಡು ಬೆಳೆದಿದೆ.ಮಂತ್ರ - ತಂತ್ರಗಳ ಆರಾಧನೆಯಲ್ಲಿ ಓಂಕಾರಕ್ಕೆ ಅಗ್ರಸ್ಥಾನ. ಓಂಕಾರವೇ ಸರ್ವಮೂಲಮಂತ್ರ. ಹಾಗಎಯೇ ಗಣಪತಿಯೂ ಆದಿಪೂಜ್ಯನಾದ ಮಹಾದೇವ. ಆದುದರಿಂದಲೇ ಗಣಪತಿ ಪಂಥದವರು ಅವನನ್ನು ಪರಬ್ರಹ್ಮರೂಪ - ಎಂದು ಹಾಡಿರುವರು.

## ಸಂಕಷ್ಟಹರಗಣಪತಿವ್ರತದ ಮುಖ್ಯೋದ್ದೇಶ

ಈ ಪ್ರಪಂಚದಲ್ಲಿ ಜನ್ಮವೆತ್ತಿರುವ ಪ್ರತಿಯೊಬ್ಬರೂ ತಮ್ಮ ತಮ್ಮ ಜನ್ಮಾಂತರದಲ್ಲಿ ಮಾಡಿದ ಶುಭಾಶುಭಕರ್ಮದ ಫಲವನ್ನು ಅನುಭವಿಸಿಯೇ ತೀರಬೇಕು. **"ನಾಭುಕ್ತಂ ಕ್ಷೀಯತೇ ಕರ್ಮ"** ಎಂಬಂತೆ, ಕರ್ಮವು ಪಕ್ವವಾಗದೆ ಏನೂ ಸಾಧಿಸಲಾಗುವುದಿಲ್ಲ. ಈ ಜಗತ್ತಿನಲ್ಲಿ ಬಡವರು, ಶ್ರೀಮಂತರು, ರಸಿಕರು, ವಿಲಾಸಿಗಳು, ರೋಗಿಗಳು - ಎಲ್ಲರೂ ತಂತಮ್ಮ ಜನ್ಮಾಂತರೀಯ ಕರ್ಮಫಲ ಭಾಗಿಗಳೇ. ಆದುದರಿಂದ ಅವರು ಮಾಡಿರುವ ಅಶುಭಕರ್ಮಕ್ಕನುಸಾರವಾಗಿ ಕಷ್ಟಕಾರ್ಪಣ್ಯಗಳನ್ನು ಹೊಂದಿ, ಅದನ್ನು ಅನುಭವಿಸಲೇಬೇಕು. ಅದಕ್ಕಾಗಿಯೇ ಬಗೆಬಗೆಯ ಕರ್ಮಕಾಂಡಗಳು ಹುಟ್ಟಿಕೊಂಡಿವೆ. ಯಾರಿಗೆ ಯಾವುದು ಅನುಕೂಲವೋ ಅವರು ಅದನ್ನಾಶ್ರಯಿಸಿ ಕೃತಾರ್ಥರಾಗಬಹುದು. ಅವುಗಳಲ್ಲಿ **ವ್ರತಾಚರಣೆಯೂ** ಒಂದಾಗಿದೆ. ಆ ವ್ರತಗಳಲ್ಲಿ **ಶ್ರೀಸಂಕಷ್ಟಹರಗಣೇಶಚತುರ್ಥೀ** ವ್ರತವು ಭಕ್ತಜನರ ಸಮಸ್ತ ಸಂಕಷ್ಟಗಳನ್ನು ದೂರೀಕರಿಸುವುದಾಗಿದೆ. ಇದನ್ನು ಆಚರಿಸಿದ ಜನರೇ ಇಲ್ಲವೆಂದರೂ ತಪ್ಪಾಗದು. ಶ್ರೀಸಂಕಷ್ಟಹರಗಣೇಶ ಸಕಲರ ಸಕಲ ವಿಧವಾದ ಸಂಕಷ್ಟಗಳನ್ನು ದೂರೀಕರಿಸಿ ಎಲ್ಲರ ಮಾನವ ಜನ್ಮವನ್ನು ಸಫಲಗೊಳಿಸಲಿ - ಎಂದು ಅವನನ್ನೇ ಪ್ರಾರ್ಥಿಸುವೆನು.

